# ಶಾನ್ತಾ

## ( ಋಷ್ಯಶೃಂಗೋಪಾಖ್ಯಾನ )

ಒಂದು ಸಣ್ಣ ದೃಶ್ಯ

**ಶ್ರೀನಿವಾಸ**



ಬೆಂಗಳೂರು ಸಿಟಿ:

**ಬೆಂಗಳೂರು ಪ್ರೆಸ್, ಮೈಸೂರು ರೋಡ್**

೧೯೨೮



[ ಬೆಲೆ ೬ ಆಣೆ

# ಎರಡನೆಯ ಮುದ್ರಣದ ಮುನ್ನುಡಿ

---

ಈ ಸಣ್ಣ ದೃಶ್ಯವನ್ನು ಬೊಂಬಾಯಿ ವಿಶ್ವವಿದ್ಯಾಪೀಠದ ಅಧಿಕಾರಿಗಳು ಮುಂದಿನ ವರ್ಷದ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಪಾಠ ಪುಸ್ತಕವಾಗಿ ನಿಯಮಿಸಿದಾರೆ. ಹಿಂದಣ ಮುದ್ರಣದ ಪ್ರತಿಗಳು ಸಾಕಾದಷ್ಟು ಉಳಿದಿಲ್ಲವಾಗಿ ಈ ಮುದ್ರಣವನ್ನು ಮಾಡಿಸಿದೆ.

ಮೈಸೂರು, ವಿಭವ ಸಂ||<br>ವೈಶಾಖ ಶುದ್ಧ ಪಾಡ್ಯಮಿ.

ಶ್ರೀನಿವಾಸ.

---

## ಶ್ರೀನಿವಾಸ ರಚಿತ

---

ಕೆಲವು ಸಣ್ಣ ಕತೆಗಳು

ಬಿನ್ನಹ (ಗೀತೆಗಳು)

ಶಾನ್ತಾ (ಸಣ್ಣ ದೃಶ್ಯ)

ಸಾವಿತ್ರಿ ( ,, )

ಸಣ್ಣ ಕತೆಗಳು

ಸಾಹಿತ್ಯ (ಉಪನ್ಯಾಸ)

ಅರುಣ (ಪದ್ಯ)

ವಿಮರ್ಶೆ (ಲೇಖನಗಳು)

ಉಷಾ (ಸಣ್ಣ ದೃಶ್ಯ)

ಸುಬ್ಬಣ್ಣ (ಒಂದು ಕತೆ)

---

ಇವು ದೊರೆಯುವ ಸ್ಥಳಗಳು :—

ದಿ ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು

ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು

ಎಂ. ಎಸ್. ರಾವ್ ಕಂಪೆನಿ, ದೊಡ್ಡಪೇಟೆ, ಬೆಂಗಳೂರು

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ, ಮಾಳಮಡ್ಡಿ, ಧಾರವಾಡ

# ಶಾನ್ತಾ

---

## ಪಾತ್ರಗಳು

ರಾಜ — ಕೇರಳಾಧಿಪತಿ.

ರಾಜಗುರು.

ಇಬ್ಬರು ಪ್ರಧಾನಿಗಳು.

ಚಂಚಲಾ — ರಾಜನ ಪುತ್ರಿ.

ಸುಂದರಿ<br>ಸುಖಲತಾ } ರಾಜಕುಮಾರಿಯ ಕೆಳದಿಯರು<br>ಲಲಿತಾ

ಋಷ್ಯಶೃಂಗ — ಋಷಿಕುಮಾರ.

ವಿಭಾಂಡಕ — ಋಷ್ಯಶೃಂಗನ ತಂದೆ.

ಸೇವಕರು, ವಂದಿಮಾಗಧರು, ಜನರು.

ಶ್ರೀ

# ಶಾನ್ತಾ

## (ಋಷ್ಯಶೃಂಗೋಪಾಖ್ಯಾನ)

ಒಂದು ಸಣ್ಣ ದೃಶ್ಯ

---

## ಒಂದನೆಯ ಸ್ಥಾನ

ಲೋಮಪಾದರಾಯನ ಆಸ್ಥಾನ.

ರಾಜಗುರುವೂ ಇಬ್ಬರು ಪ್ರಧಾನಿಗಳೂ ಇರುವರು
ರಾಜನು ಪ್ರವೇಶಿಸುವನು

**ಗುರು.—** (ವೃತ್ತ)

ಶ್ರೀದೇವೀನಿಲಯಂ ದಯಾಹೃದಯನೊರ್ವಂ ಸಚ್ಚಿದಾನಂದನಾರ್
ಮಾದೇವಂಹರಿಬೊಮ್ಮರೆಂದೆನಿಸುವಂ ಸೃಷ್ಟ್ಯಾದಿ ಕಾರ್ಯಂಗಳೊಳ್
ಆ ದೇವಂ ಕರುಣಾರಸಕ್ಕನಿಶಮುಂಕಾದಿರ್ಪ ಮೂಲೋಕಕಾ
ಮೋದಾಹ್ಲಾದದ ವೃಷ್ಟಿಯಂ ಕರೆದು ತಾಂ ಪಾಲಿಕ್ಕೆ ಸಂಸೃಷ್ಟಿಯಂ ॥

**ರಾಜ.**—ಪೂಜ್ಯರಿಗೆ ವಂದಿಸುವೆನು.

**ಗುರು.**—ಮಹಾರಾಜನಿಗೆ ಒಳ್ಳೆಯದಾಗಲಿ.

**ರಾಜ.**—ಈ ಕೇರಳ ರಾಜ್ಯವು ಹೀಗೆ ಕ್ಷಾಮಪೀಡಿತವಾಗಿದ್ದಷ್ಟು ದಿನವೂ ನಾನು ಒಳ್ಳೆಯದಾವುದನ್ನೂ ಕಾಣುವೆನೆಂದೆಣಿಸಲಾರೆನು.

**ಮೊದಲನೆಯ ಪ್ರಧಾನಿ.**—ಅದು ನಿಶ್ಚಯ.

**ಗುರು.**—ಶ್ರೀಹರಿಯ ಕೃಪೆಯಿಂದ ಈ ಕಷ್ಟವೂ ನೀಗುವುದು.

**ರಾಜ.**—ನಾವು ದಿನವೂ ದೇವರಿಗೆ ಮೊರೆಯಿಡುತ್ತಿದ್ದೇವೆ. ಇರುವುದನ್ನು ಸಾಧ್ಯವಾದಷ್ಟು ಬ್ರಾಹ್ಮಣರಿಗೆ ದಾನಮಾಡುತ್ತಿದ್ದೇವೆ. ತಾವೂ ನಮ್ಮ ಸೀಮೆಯ ಇತರ ದ್ವಿಜೋತ್ತಮರೂ ದಿನವೂ ಸ್ವಸ್ತಿವಾಚನವನ್ನು ನುಡಿಯುತ್ತಿರೋಣವಾಗಿದೆ. ಆದರೂ ಸರ್ವೇಶ್ವರನು ಇನ್ನೂ ತನ್ನ ಕೃಪೆಯನ್ನು ತೋರಲಿಲ್ಲ.

**ಎರಡನೆಯ ಪ್ರಧಾನಿ.**—ಬೊಕ್ಕಸವು ಬರಿದಾಯಿತು. ಇನ್ನು ದಾನಾದಿಗಳಿಗೆ ಅವಕಾಶವಿಲ್ಲ. ಊರುಗಳಲ್ಲಿ ಜನರು, ಇರುವ ಕೊಂಚವನ್ನು ತಿಂದಷ್ಟುದಿನ ತಿಂದು ಪ್ರಾಣಬಿಡೋಣ, ಎಂದು ಹೇಳುತ್ತಿದಾರೆ.

**ಮೊದಲನೆಯ ಪ್ರಧಾನಿ.**—ಸರಿಯಾದ ಮಳೆ ಬಂದು ಹನ್ನೆರಡು ವರ್ಷವಾಯಿತು. ಎಲ್ಲರೂ ನಿರಾಶರಾಗಿದ್ದಾರೆ. ವರ್ಷವರ್ಷಕ್ಕೆ ಹಸಿಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಈ ಕ್ಷೋಭೆಯಲ್ಲಿ ದಾನಮಾಡು ಎಂದು ಹೇಳುವುದಕ್ಕೆ ಯಾರಿಗೂ ನಾಲಗೆಯೇ ಇಲ್ಲ.

**ರಾಜ.**—ಇದು ಬಹು ದುರವಸ್ಥೆಯೇ ಸರಿ. ಇನ್ನಿದಕ್ಕೆ ಏನು ಮಾಡುವುದೋ ಗುರುಗಳು ನಿರೂಪಿಸಬೇಕು.

**ಗುರು.**—ಇದಕ್ಕೆ ಒಂದು ಉಪಾಯವಿರುವಂತಿದೆ. ನಿನ್ನೆಯ ದಿನ ನಮ್ಮ ಗುರುಗಳನ್ನು ಕೇಳಿ ತಿಳಿದುಕೊಂಡು ಬಂದೆ. ಅದನ್ನು ಮಾಡಿ ನೋಡುವುದಾದರೆ ನೋಡಬಹುದು.

**ರಾಜ.**—ಅದೇನು ಎಂದು ತಿಳಿಸಬೇಕು. ಸಾಧ್ಯವಾದುದನ್ನೆಲ್ಲಾ ಮಾಡುವುದು.

**ಗುರು.**—ಇದಕ್ಕೆ ಮೂರು ಯಾಗಗಳನ್ನು ಮಾಡಬೇಕು.

**ಮೊದಲನೆಯ ಪ್ರಧಾನಿ.**—ಸರಿಯಾಯಿತು.

**ಎರಡನೆಯ ಪ್ರಧಾನಿ.**—ಮೂರಲ್ಲ ಒಂದು ಯಾಗವನ್ನು ಮಾಡುವುದಕ್ಕಾದರೂ ಈಗ ಸಾಮಗ್ರಿಯನ್ನು ಒದಗಿಸುವುದು ಕಷ್ಟವಾಗುವುದು.

**ಗುರು.**—ಯಾಗಕ್ಕೆ ಸಾಮಗ್ರಿಯನ್ನು ಒದಗಿಸುವುದಕ್ಕೆ ಕಷ್ಟವಾಗುವುದೇನೋ ನಿಜ. ಆದರೆ ಅದಕ್ಕೆ ಪುರೋಹಿತನನ್ನು ತರುವುದು ಅದಕ್ಕಿಂತ ಬಹಳ ಕಷ್ಟ.

**ರಾಜ.**—ಎಲ್ಲವನ್ನೂ ಮಾಡುವುದು. ಎಷ್ಟು ಕಷ್ಟವಾದರೂ ಮಾಡದೆ ಬಿಡುವೆವೆನ್ನುವುದಕ್ಕೆ ಇದು ಸಮಯವಲ್ಲ. ಪುರೋಹಿತರನ್ನು ತರುವುದು ಏಕೆ ಕಷ್ಟ?

**ಗುರು.**—ಈ ಪೌರೋಹಿತ್ಯದ ಅಧಿಕಾರವನ್ನುಳ್ಳವರು ಈಗ ಒಬ್ಬನ ಹೊರತು ಇನ್ನು ಯಾರೂ ಇಲ್ಲ. ಆತನನ್ನು ಕರೆತರುವುದು ಕಷ್ಟ.

**ರಾಜ.**—ಅವರು ಯಾರು?

**ಗುರು.**—ಋಷ್ಯಶೃಂಗನೆಂಬ ಮುನಿಪುತ್ರನು.

**ರಾಜ.**—ಅವರ ವಿಷಯವೇನು? ಅವರಿರುವುದೆಲ್ಲಿ? ಎಲ್ಲವನ್ನೂ ವಿವರಿಸಿ ಹೇಳಬೇಕು.

**ಗುರು.**—ಋಷ್ಯಶೃಂಗನು ವಿಭಾಂಡಕಋಷಿಯ ಪುತ್ರನು. ಈ ಕುಮಾರನನ್ನು ಪಡೆದ ಕೆಲದಿನದಲ್ಲೇ ಆ ಋಷಿಯ ಪತ್ನಿಯು ತೀರಿಹೋದದ್ದರಿಂದ ಋಷಿಯು ಖಿನ್ನನಾಗಿ ಈ ಮಲೆಗಳ ಮಧ್ಯದ ನಿರ್ಜನ ಪ್ರದೇಶವಾದ ಸ್ಥಾನ ಒಂದರಲ್ಲಿ ಆಶ್ರಮವನ್ನು ಮಾಡಿಕೊಂಡು ನಿಂತನು. ಆ ಕುಮಾರನ ಯೋಗದಲ್ಲಿ ಹದಿನೆಂಟು ವರುಷದವರೆಗೆ ಸ್ತ್ರೀಸ್ವರೂಪವನ್ನೇ ಅರಿಯದೆ ಇದ್ದರೆ ಸ್ಥಿರಜೀವಿತ್ವವು ಉಂಟಾಗುವುದೆಂದು ತೋರಿದ್ದರಿಂದ ಆತನು ಮಗನನ್ನು ಆಶ್ರಮದಲ್ಲಿ ಆ ರೀತಿಯಲ್ಲಿ ಸಾಕಿ, ಈವರೆಗೆ ಅಷ್ಟಾಂಗಯೋಗಾದಿ

ಗಳನ್ನು ಹೇಳಿಕೊಟ್ಟು, ವೇದ ವೇದಾಂಗಗಳಲ್ಲಿ ಪಾರಂಗತ ನನ್ನಾಗಿ ಮಾಡಿ, ಆತನನ್ನು ಮೌನಿವೃತ್ತಿಯಲ್ಲಿ ಶ್ರೇಷ್ಠ ಪದವಿಗೆ ತಂದಿದಾನೆ. ಈ ಕ್ರತುಗಳನ್ನು ನಡೆಯಿಸಬೇಕಾದರೆ ವಿಭಾಂಡಕ ನಿಗೆ ಆತನ ಕುಮಾರನಿಗೆ ಹೊರತು ಉಳಿದವರಿಗೆ ತಿಳಿಯದು. ವಿಭಾಂಡಕನಾದರೋ ತನ್ನ ಗುರುವಿನೊಂದಿಗೆ ವಿಧಿಯಿಲ್ಲದೆ ಬದರಿ ಕಾಶ್ರಮದ ಕಡೆಗೆ ಹೋದ ವರುಷ ತೆರಳಬೇಕಾಗಿ ಬಂದು ಅವ ರೊಂದಿಗೆ ಹೋಗಿರುವನಾದುದರಿಂದ ಈ ಕಾರ್ಯಕ್ಕೆ ಈಗ ಸಿಕ್ಕುವವನಾಗಿ ಇಲ್ಲ. ಆದುದರಿಂದ ಅವನ ಕುಮಾರನನ್ನು ಕರೆತಂದರೆ ಯಾಗಗಳು ನಡೆಯುಬಹುದು. ಇಲ್ಲದಿದ್ದರೆ ಇಲ್ಲ.

**ರಾಜ.**—ಕರೆತರುವುದಕ್ಕೆ ಅಡ್ಡಿಯೇನು?

**ಗುರು.**—ಆತನಿಗೆ ಸ್ತ್ರೀಯನ್ನು ನೋಡಬಾರದೆಂದು ನಿಯಮ ಇರುವ ಆ ವಯಸ್ಸು ಇನ್ನೂ ಕಳೆದಂತೆ ತೋರುವುದಿಲ್ಲ. ಆತನ ತಂದೆಯು ಈ ಕಾರಣದಿಂದ ತಾನು ಬದರಿಕಾಶ್ರಮಕ್ಕೆ ಹೋಗುವಾಗ್ಯೆ ತಾನು ಬರುವುದು ಒಂದು ವರುಷವಾಗುವುದೆಂದೂ ಆವರೆಗೆ ಮಗನು ಆಶ್ರಮವನ್ನು ಬಿಟ್ಟು ಎಲ್ಲೂ ಹೋಗಕೂಡದೆಂದೂ ಕಟ್ಟಾಜ್ಞೆಯನ್ನು ಮಾಡಿ ಹೋಗಿದಾನೆ.

**ರಾಜ.**—ಆಯಿತು.

**ಗುರು.**—ಆತನು ತಂದೆಯ ಮಾತನ್ನು ಈವರೆಗೆ ಮೀರಿದವನಲ್ಲ. ಈಗ ಮೀರುವಂತೆ ಮಾಡುವುದು ಸುಲಭಸಾಧ್ಯವಲ್ಲ.

**ಮೊದಲನೆಯ ಪ್ರಧಾನಿ.**—ಚಿರಜೀವಿತ್ವ ಬರಲು ಸ್ತ್ರೀಯನ್ನು ನೋಡದೆ ಇರು ವುದು ಆವಶ್ಯಕವೆಂದು ತಿಳಿದಿರುವವನು ಹೇಗಿದ್ದರೂ ಇಲ್ಲಿಗೆ ಬರಲಾರನು. ತಂದೆಯ ಆಜ್ಞೆ ಇಲ್ಲದಿದ್ದರೂ ಈ ಉದ್ದೇಶ ಒಂದು ಇದ್ದೀತಷ್ಟೆ.

**ಗುರು.**—ನಿಯಮದ ವಿಷಯ ಋಷಿಪುತ್ರನಿಗೆ ತಿಳಿಯದು. ತಂದೆಯು ಅವನನ್ನು ಆ ರೀತಿ ಸಾಕಿರುವನೇ ಹೊರತು ಮಗನಿಗೆ ಅದರ ವಿವರ ಗೊತ್ತಿಲ್ಲ. ಅವನು ಸ್ತ್ರೀಯರ ವಿಷಯವನ್ನೇ ಅರಿಯನು. ಅಲ್ಲದೆ

ಸ್ಥಿರಜೀವಿಯಾಗುವುದಕ್ಕಾಗಿ ಈ ವ್ರತವನ್ನು ಆಚರಿಸುತ್ತಿದೇನೆಂದು ಆತನಿಗೆ ತಿಳಿದರೆ ನಿಯಮವು ಭಂಗವಾಗುವುದು. ಆದುದರಿಂದ ಅವನಿಗೆ ಈ ಆಶೋತ್ತರವಿಲ್ಲ. ಈಗ ಆತನು ತಂದೆಯ ಆಜ್ಞೆಯನ್ನು ಮೀರುವಂತೆ ಮಾಡುವುದು ಮಾತ್ರ ಆವಶ್ಯಕ. ಇದಿಷ್ಟನ್ನು ಮಾಡುವುದೇ ಬಹಳ ಕಷ್ಟ.

ರಾಜ.—ಇದಕ್ಕೆ ತಮ್ಮ ಆಲೋಚನೆ ಏನು ?

ಗುರು.—ಗುರುಗಳು ಹೀಗೆಂದು ಅಪ್ಪಣೆಕೊಟ್ಟರು. ಆತನು ತಂದೆಯ ಮಾತನ್ನು ಕೊಂಚಕ್ಕೆ ಮೀರುವವನಲ್ಲ. ಆದರೆ ಸ್ತ್ರೀಯರನ್ನೇ ನೋಡದವನಾದುದರಿಂದ ಸುಂದರಿಯರಾದ ಕೆಲವರು ಸ್ತ್ರೀಯರನ್ನು ಕಳುಹಿಸಿ ಅವನನ್ನು ಅವರು ಆಕರ್ಷಣಮಾಡಿ ಕರೆದುಕೊಂಡು ಬರುವಂತೆ ಮಾಡಿದರೆ ಆಗಬಹುದೆಂದು ಹೇಳಿದರು. ಎಂದೂ ಕಾಣದ ಈ ಒಂದು ಸೌಂದರ್ಯದಿಂದ ಆಕೃಷ್ಟನಾಗಿ ಅವನು ಬಂದರೆ ಬರಬಹುದೇ ಹೊರತು ಇನ್ನು ಯಾವ ಇದಕ್ಕೆ ಕಡಿಮೆಯ ಒಂದು ಕಾರಣದಿಂದಲೇ ಆಗಲಿ ತಂದೆಯ ಮಾತನ್ನು ಮೀರಿ ಇಲ್ಲಿಗೆ ಬರಲಾರನು.

ರಾಜ.—ಗುರುಗಳು ಇಂಥಾ ಯೋಚನೆಯನ್ನು ನಿಜವಾಗಿಯೂ ಹೇಳುವರೇ ಎಂದು ನನಗೆ ಸ್ವಲ್ಪ ಸಂದೇಹ ತೋರುತ್ತದೆ.

ಗುರು.—ಏತಕ್ಕೆ ?

ರಾಜ.—ಸ್ವರ್ಗಭೋಗದ ಅಪೇಕ್ಷೆಯಿಂದ ಧರ್ಮವಿಮುಖರಾಗಿ ಇಂದ್ರಾದಿಗಳು ವಿಶ್ವಾಮಿತ್ರರಂಥವರನ್ನು ಕೆಡಿಸುವುದಕ್ಕೆ ರಂಭೆ ಮೇನಕೆಯರನ್ನು ಕಳುಹಿಸಿದರೆಂಬುದು ಪುರಾಣಪ್ರಸಿದ್ಧವು. ಈ ತೆರನಾದ ಅಧರ್ಮ ಕೃತ್ಯಗಳಿಗೆ ನಾವು ಕೈಹಾಕುವ ವಿಷಯವು ತಮ್ಮ ಗುರುಗಳಿಗೂ ತಮಗೂ ಹೇಗೆ ಸಮ್ಮತವಾದೀತು ?

ಗುರು.—ರಾಜನೆ ! ಇದರಲ್ಲಿ ಅಧರ್ಮವೇನೂ ಇಲ್ಲ. ಬಾಲಕನನ್ನು ಇಲ್ಲಿ ಕರೆತರುವುದಕ್ಕೆ ಈ ಪ್ರಯತ್ನವೇ ಹೊರತು ಯಾವ ತಪಸ್ಸನ್ನೂ ಕೆಡಿಸುವುದಕ್ಕಾಗಿ ಅಲ್ಲ.

**ರಾಜ.**—ಸ್ಥಿರಜೀವಿಯಾಗುವವನನ್ನು ಎಲ್ಲರಂತೆ ಮೃತ್ಯುವಿನ ಅಧೀನಕ್ಕೆ ತರುವುದು ಧರ್ಮಕ್ಕೆ ವಿರೋಧವೆಂದು ನನಗೆ ಕಾಣುತ್ತದೆ.

**ಗುರು.**—ಆ ನಿಯಮದ ದಿನವು ಮುಗಿದಿದ್ದರೂ ಮುಗಿದಿರಬಹುದು.

**ರಾಜ.**—ಮುಗಿಯದೆ ಇದ್ದರೂ ಇರಬಹುದು. ಅದು ಹೇಗಾದರೂ ಆಗಲಿ.

(ಕಂದ)

ವರುಷವ ನೀಡುತೆ ಪೊರೆವಡೆ
ಪೊರೆಯಲಿ ಹರಿ ಪೊರೆಯದಳಿಸಲೆಲ್ಲರುಮಳಿವಂ
ಧರುಮವನುಳಿಯುತೆ ಮಳೆಗೆನು
ತರೆಯಡಿಯುಂ ಸುಳಿಯಲಾರದಿಹುದೆನ್ನ ಮನಂ ||

ಇದು ನಿಶ್ಚಯವಾದ ಮಾತು.

**ಗುರು.**—ರಾಜನೆ ಧರ್ಮದಲ್ಲಿ ನಡೆಯುವುದನ್ನು ಹೇಳಿಕೊಡತಕ್ಕವರು ಈಗ ಧರ್ಮವನ್ನು ಬಿಟ್ಟು ನಡೆಯೆಂದು ಹೇಳರಲ್ಲವೆ? ಪ್ರಜೆಗಳೆಲ್ಲ ಕ್ಷಾಮದಿಂದ ನರಳುತ್ತಿರುವರು. ಈ ವರ್ಷವಾದರೂ ಮಳೆ ಬಂದರೆ ರಾಜ್ಯವು ಉಳಿದುಕೊಳ್ಳುವುದು. ಇಲ್ಲದಿದ್ದರೆ ಕೇವಲ ಕ್ಷುದ್ಬಾಧೆಯಿಂದ ಲಕ್ಷಾಂತರ ಪ್ರಾಣ ನಷ್ಟವಾಗುವುದು. ಇದನ್ನು ತಪ್ಪಿಸುವುದಕ್ಕೆ ವಿಭಾಂಡಕನು ಅಥವಾ ಅವನ ಮಗನು ಬರಬೇಕು. ವಿಭಾಂಡಕನು ಬರುವಹಾಗಿಲ್ಲ. ಅವನ ಮಗನು ಬರುವಂತೆ ಮಾಡುವುದಕ್ಕೆ ಒಂದು ದಾರಿಯಿದೆ. ಅದನ್ನು ಸ್ವೀಕರಿಸಬೇಕು. ಲಕ್ಷಾಂತರ ಜೀವಗಳನ್ನು ಉಳಿಸುವುದಕ್ಕೆ ಇದು ಒಂದು ಯತ್ನ.

**ರಾಜ.**—ಇದೊಂದು ಧರ್ಮಸಂಕಟವಾಗಿದೆ. ಆಗಲಿ. ಹಾಗೆ ಕರೆತರುವುದಕ್ಕೆ ಏರ್ಪಾಡು ಮಾಡುವುದಾದರೂ ಶುಭ್ರಮಾನಸನಾದ ಋಷಿಕುಮಾರನನ್ನು ಒಲಿಸಿ ಕರೆತರುವ ಚೆಲ್ವಿನ ಸ್ತ್ರೀಯರನ್ನು ಎಲ್ಲಿ ಹುಡುಕುವುದು?

**ಗುರು.**—ಅದಕ್ಕೆ ನಾವು ಇಷ್ಟು ಯೋಚಿಸಬೇಕೆ?

(ಕಂದ)

ಕೇರಳ ಸುತೆಯರ ಚೆಲ್ವಿಂ
ಮಾರನಸತಿಯೊಂದು ಚೆಲ್ವು ಪಡೆದುದು ನಾಣಂ
ಕೇರಳಮಂ ನಾಡುಗಳೊಳ್
ಸಾರಮದೆಂದೊರೆವರಲ್ತೆ ಈ ಕಾರಣದಿಂ ||

ಆದುದರಿಂದ ಈ ಕಾರ್ಯಕ್ಕೆ ಬೇಕಾದವರನ್ನು ಸುಲಭವಾಗಿಯೇ ಕರೆಯಿಸಬಹುದು. ಇದಕ್ಕೆ ಯೋಚಿಸಬೇಕಾದುದಿಲ್ಲ.

**ರಾಜ.**—ಈ ಕಾರ್ಯ ಅಷ್ಟಾಗಿ ಸರಿಯಾದುದೆಂದು ತೋರದೆ ಇದ್ದರೂ ರಾಜ್ಯದ ಕ್ಷೇಮಕ್ಕಾಗಿ ಇದನ್ನು ಕೈಗೊಳ್ಳಬೇಕಾಗಿದೆ. ಮಂತ್ರಿವರ್ಯರು ಇದಕ್ಕೆ ತಕ್ಕ ಏರ್ಪಾಡನ್ನು ಮಾಡಬೇಕು.

**ಮೊದಲನೆಯ ಪ್ರಧಾನಿ.**—ಅಪ್ಪಣೆ.

(ಸೇವಕನೊಬ್ಬನು ಪ್ರವೇಶಿಸುವನು)

**ಸೇವಕ.**—ಮಹಾಸ್ವಾಮಿ (ಎಂದು ನಮಸ್ಕರಿಸುವನು).

**ರಾಜ.**—ಯಾರಯ್ಯ?

**ಸೇವಕ.**—ಚಂಚಲಕುಮಾರಿಯವರು ಸಮಯವನ್ನು ಕೇಳುತ್ತಾರೆ.

**ರಾಜ.**—ಬರಹೇಳು (ಸೇವಕನು ಹೋಗುವನು.) ನಮ್ಮ ಕುಮಾರಿಗೆ ಈ ವಿಷಯಗಳನ್ನೆಲ್ಲ ತಿಳಿಸಬಹುದು. ಅವಳು ಏನು ಹೇಳುವಳೋ ನೋಡುವ.

**ಗುರು.**—ಕುಮಾರಿಯು ನಾವು ಮಾಡಿರುವ ಉದ್ದೇಶವನ್ನು ಒಪ್ಪುವಳು. ಅವಳ ಧರ್ಮಜ್ಞತೆಯು ಅವಳ ಗುಣರೂಪಗಳಿಗೆ ಎಣೆಯಾದದ್ದು.

(ಚಂಚಲಕುಮಾರಿಯು ಪ್ರವೇಶಿಸುವಳು)

**ಚಂಚಲಾ.**—ತಂದೆಯೇ, ನಮಸ್ಕರಿಸುವೆನು. ಪೂಜ್ಯರಿಗೆ ವಂದನೆ.

**ಗುರು.**—ನಿನಗೆ ಮಂಗಳವಾಗಲಿ.

**ರಾಜ.**—ಬಾ ತಾಯಿ ಚಂಚಲಾ.

**ಪ್ರಧಾನಿಗಳು.**—ಅಪ್ಪಣೆಯಾದರೆ ನಾವು ಹೊರಡುವೆವು.

**ಚಂಚಲಾ.**—ತಂದೆಯೇ, ನಾನು ನಿಮ್ಮಲ್ಲಿ ವಿಜ್ಞಾಪನೆ ಮಾಡಿಕೊಳ್ಳು ವುದಕ್ಕೆ ಬಂದಿರುವ ವಿಷಯವನ್ನು ಇವರೂ ಕೇಳಬೇಕು.

**ರಾಜ.**—ಆಗಬಹುದು. ಆ ವಿಷಯವೇನು ತಾಯಿ?

**ಚಂಚಲಾ.**—ನಾಳೆ ನನ್ನ ವರ್ಧಂತಿಯ ದಿನ.

**ರಾಜ.**—(ತಾನೇ) ನಮ್ಮ ರಾಜ್ಯದ ಈಗಣ ಅವಸ್ಥೆಯಲ್ಲಿ ನಾನು ಅದನ್ನು ಮರೆತೆನು.

**ಚಂಚಲಾ.**—ವಿಶೇಷ ಸಂತೋಷಕ್ಕೆ ಯಾರಿಗೂ ಮನಸ್ಸಿಲ್ಲ. ಆದರೂ ಕೆಳದಿಯರು ಸ್ವಲ್ಪ ವಿನೋದವಾಗಿರೋಣ ಎಂದು ಆಟಪಾಟಕ್ಕೆ ಸಜ್ಜುಮಾಡುತ್ತಿದ್ದರು.

**ರಾಜ.**—ಸರಿ.

**ಚಂಚಲಾ.**—ಆಗ ಮಾಲಿನಿ ಬಂದು ಒಂದು ಮಾತನ್ನು ಹೇಳಿದಳು. ಎಲ್ಲರೂ ಮನಸ್ಸು ಇಳಿದು ಸುಮ್ಮನಾದರು.

**ರಾಜ.**—ಏನು ಹೇಳಿದಳು?

**ಚಂಚಲಾ.**—ಕ್ಷಾಮದ ಕಷ್ಟವನ್ನು ತಡೆಯಲಾರದೆ ರಾಜ್ಯದಲ್ಲಿ ಜನರು "ಈ ಕುವರಿಯು ಹುಟ್ಟಿದ ಐದನೆಯ ವರ್ಷದ ಯೋಗ ಕೆಟ್ಟದು. ಅಂದಿನಿಂದ ಈವರೆಗೆ ಕ್ಷಾಮವು ಅಬ್ಬರಿಸಿ ಬಡಿಯುತ್ತಿದೆ. ಇದಕ್ಕೆ ಏನಾದರೂ ಶಾಂತಿಯನ್ನು ಮಾಡಬೇಕು" ಎನ್ನುವರಂತೆ.

**ರಾಜ.**—ಛೆ ಯಾತರ ಮಾತು ಇದು?

**ಮೊದಲನೆಯ ಪ್ರಧಾನಿ.**—ಇದು ಯಾರು ಹೇಳಬಹುದಾದ ಮಾತು?

**ಎರಡನೆಯ ಪ್ರಧಾನಿ.**—ಎಲ್ಲಿಯಾದರೂ ಉಂಟೆ?

**ಗುರು.**—ಈ ಮಾತನ್ನು ಕುಮಾರಿಗೆ ಮಾಲಿನಿ ಹೇಳಬಹುದೆ?

**ಚಂಚಲಾ.**—ಸಾಕಿದ ಮುದುಕಿ ಮನಸ್ಸು ತಡೆಯದೆ ಹೇಳಿದಳು. ಅದು ಹಾಗಿರಲಿ. ನಾನು ಯೋಚಿಸಿದ್ದರಲ್ಲಿ ನನಗೂ ಹಾಗೆಯೇ ತೋರಿತು.

**ರಾಜ.**—ಏನು ತೋರಿತೆನ್ನುವೆ ?

**ಚಂಚಲಾ.**—ನನ್ನಿಂದ ಈ ಕ್ಷಾಮವು ಬಂದೊದಗಿದೆ. ನನ್ನಿಂದ ಇದು ನಿವಾರಣೆಯಾಗಬೇಕೆಂದು ತೋರುತ್ತದೆ. ಇದಕ್ಕೆ ಯಾವ ಶಾಂತಿಯನ್ನು ಮಾಡಬೇಕೋ ಗುರುಗಳನ್ನು ವಿಚಾರಿಸಬೇಕು. ಆವಶ್ಯಕವಾದ ಶಾಂತಿಯನ್ನು ಮಾಡಿಸುವೆವೆಂದು ರಾಜ್ಯದಲ್ಲಿ ಪ್ರಚುರಪಡಿಸುವಂತೆ ಪ್ರಧಾನಿಗಳಿಗೆ ಹೇಳಬೇಕು. ಜನಕ್ಕೆ ಸ್ವಲ್ಪವಾದರೂ ಧೈರ್ಯವುಂಟಾದರೆ ಅದೇ ನನಗೆ ವರ್ಧಂತಿಯ ಹಬ್ಬ.

**ಗುರು.**—ರಾಜಕುಮಾರಿ, ನಿನ್ನ ಮನಸ್ಸು ಹೀಗೆಂದು ನಾವು ಬಲ್ಲೆವು. ಆದರೆ ಕ್ಷಾಮವು ನಿನ್ನಿಂದ ಬಂದದ್ದೆಂದು ಹೇಳುವುದು ತಿಳಿಯದವರ ಮಾತು. ಇದರಿಂದ ನೀನು ಖಿನ್ನಳಾಗಬೇಡ. ಈಗ ನೀನು ಬರುವುದಕ್ಕೆ ಮುಂದು ನಾವು ಇಲ್ಲಿ ಕ್ಷಾಮನಿವಾರಣೆಗೆ ಏನು ಮಾಡುವುದೆಂದೇ ಯೋಚಿಸುತ್ತಿದ್ದೆವು. ಏನು ಮಾಡುವುದೆಂದು ನಿರ್ಧರಮಾಡಿದ್ದೇವೆ.

**ಚಂಚಲಾ.**—ತಂದೆಯೆ ಏನೆಂದು ನಿರ್ಧರಮಾಡಿದಿರಿ ?

**ರಾಜ.**—ಋಷ್ಯಶೃಂಗನೆಂಬ ಋಷಿಕುಮಾರನಿಗೆ ಈ ಸಂದರ್ಭದಲ್ಲಿ ಮಾಡಬೇಕಾದ ಮೂರು ಕ್ರತುಗಳ ಪೌರೋಹಿತ್ಯದ ಅಧಿಕಾರವಿದೆಯಂತೆ. ಆತನು ತನ್ನ ಆಶ್ರಮದಿಂದ ಬರುವುದು ದುಸ್ಸಾಧ್ಯ. ಕೆಲವರು ಸುಂದರಿಯರನ್ನು ಕಳುಹಿಸಿ ಆತನನ್ನು ಉಪಾಯದಿಂದ ಇಲ್ಲಿಗೆ ಕರೆತರುವಂತೆ ಮಾಡಬೇಕು. ಆತನು ಬಂದು ಯಾಗವನ್ನು ನಡೆಯಿಸಿದರೆ ಈ ದುರ್ಭಿಕ್ಷವು ತೊಲಗುವುದು (**ಎಂದು ಮೆಲ್ಲನೆ ಇನ್ನೆರಡು ಮಾತನ್ನು ಹೇಳುವನು**).

**ಚಂಚಲಾ.**—(**ಸ್ವಲ್ಪ ಯೋಚಿಸಿ**) ಯಾರನ್ನು ಕಳುಹಿಸುವುದೆಂದು ನಿರ್ಧರಿಸಿದಿರಿ ?

**ಗುರು.**—ಆ ವಿಷಯ ಇನ್ನೂ ನಿರ್ಧರವಾಗಿಲ್ಲ.

**ಚಂಚಲಾ.**—(**ಮತ್ತೆ ಯೋಚಿಸಿ**) ಹಾಗಾದರೆ ನನ್ನದೊಂದು ಪ್ರಾರ್ಥನೆ.

**ರಾಜ.**—ಏನು ?

**ಚಂಚಲಾ.**—ಋಷಿಕುಮಾರನನ್ನು ಕರೆತರುವುದಕ್ಕೆ ನಾನೇ ಹೋಗು ತ್ತೇನೆ. ಇದಕ್ಕೆ ಅಪ್ಪಣೆಯನ್ನು ಕೊಡಬೇಕು.

**ಗುರು.**—(**ತಾನೇ**) ಇದು ದೈವನಿಮಿತ್ತವೇ ಸರಿ.

**ರಾಜ.**—ಈ ಕೆಲಸಕ್ಕೆ ನೀನು ಹೋಗಬೇಕಾದದ್ದಿಲ್ಲ (**ಗುರುವಿಗೆ**) ತಮ್ಮ ಅಪ್ಪಣೆಯೇನು ?

**ಗುರು.**—ಕುಮಾರಿಯು ತನ್ನ ಅಭಿಪ್ರಾಯವನ್ನು ಸಂಪೂರ್ಣವಾಗಿ ತಿಳಿಸಲಿ.

**ಚಂಚಲಾ.**—ನಾನು ಹೋಗುವುದು ಸರ್ವ ವಿಧದಲ್ಲಿಯೂ ಸಮ್ಮತವಾದ ವಿಷಯವೆಂದು ತೋರುತ್ತದೆ. ಈ ಕ್ಷಾಮವು ನನ್ನಿಂದ ಬಂದಿರ ತಕ್ಕದ್ದು ಎಂದರೂ ನಾನು ಹೋಗಿ ಇದರ ನಿವಾರಣೆಯನ್ನು ತರು ವುದು ನನ್ನ ಕರ್ತವ್ಯ. ಅಲ್ಲದೆ ಋಷಿಕುಮಾರನನ್ನು ಕರೆತರು ವುದಕ್ಕೆ ಇನ್ನು ಯಾರಾದರೂ ಹೋಗುವಬದಲು ನಾನೇ ಹೋದರೆ ಆತನಿಗೆ ತಕ್ಕ ಮರ್ಯಾದೆಯನ್ನು ತೋರಿದಂತಾಗು ವುದು. ಅಲ್ಲದೆ ಆತನ ಮನಸ್ಸಿಗೆ ಸಂತೋಷವನ್ನು ತರುವುದಕ್ಕೆ ನನ್ನ ಕೆಳದಿಯರಂತೆ ಬೇರೆ ಚೆಲ್ವೆಯರು ಇರಲಾರರು. ನನಗೂ ಕೂಡ ಈ ಸಮಯದಲ್ಲಿ ವನಗಳಲ್ಲಿ ಕೆಲವು ದಿನ ಇದ್ದು ಬರೋಣ ವೆಂದು ಆಸೆ. ಆದುದರಿಂದ ನನಗೆ ಅಪ್ಪಣೆಯನ್ನು ಕೊಟ್ಟರೆ ನಾನು ಆತನನ್ನು ಕರೆದುಕೊಂಡು ಬರುವೆನು.

**ಗುರು.**—ರಾಜಕುಮಾರಿಯ ಮಾತು ಒಂದೊಂದೂ ನನ್ನ ಮನಸ್ಸಿಗೆ ಸಮ್ಮತವಾಗಿದೆ.

**ರಾಜ.**—ನನಗೆ ಒಂದೂ ತೋಚಲಿಲ್ಲ. ನಿಮ್ಮ ತಾಯಿ ಇದ್ದಿದ್ದರೆ ಇದಕ್ಕೆ ಒಪ್ಪುತ್ತಿದ್ದರೆ ?

**ಚಂಚಲಾ.**—ನಮ್ಮ ತಾಯಿ ಇದಕ್ಕೆ ಒಪ್ಪುತ್ತಿದ್ದರು.

**ಗುರು.**—ಸಂದೇಹವಿಲ್ಲ. ಇದು ರಾಜ್ಯರಕ್ಷಣೆಗಾಗಿ ಕೈಗೊಳ್ಳುತ್ತಿರುವ ಧರ್ಮವ್ರತ. ಇಂಥ ಕೆಲಸಕ್ಕೆ ಜೀವವನ್ನು ತೆರುವುದು ವೀರ ಕುವರಿಯ ಲಕ್ಷಣ. ಅಲ್ಲದೆ ರಾಜನೆ ಈ ಕಷ್ಟಸಾಧ್ಯವಾದ ಕೆಲಸ ವನ್ನು ನಡೆಯಿಸುವುದಕ್ಕೆ ಬೇಕಾದ ಸೌಂದರ್ಯವೂ ಕಾರ್ಯ ದಕ್ಷತೆಯೂ ಚಂಚಲಕುಮಾರಿಯಲ್ಲಿ ಸೇರಿರುವ ಹಾಗೆ ಇನ್ನು ಯಾರಲ್ಲಿ ಸೇರಿರುವುವು ?

(ವೃತ್ತ)

ರತಿಯಂ ಪೋಲ್ಪಳು ರೂಪದೊಳ್ ಕಲೆಯೊಳಂಭೋಜಾತಸಂಜಾತನಾ
ಸತಿಯಂ ತಾಂ ದೊರೆವರ್ಪಳಂತೆಯೆ ಮಹಾಸೌಭಾಗ್ಯದೊಳ್
ಲಕ್ಷ್ಮಿಯಂ
ಜೊತೆವರ್ಪಳ್ ಸುತೆ ಚಂಚಲಾಕುವರಿ ತಾನೀಕಾರ್ಯಮಂ ಕೈಕೊಳಲ್
ವಿತತ ಪ್ರೌಢಿ ವಿಲಾಸದಿಂ ತರುವಳೈ ಸಂಸಿದ್ಧಿಯಂ ಶೀಘ್ರದೊಳ್ ‖

ಆದುದರಿಂದ ನೀವು ಇದಕ್ಕೆ ಒಪ್ಪಬಹುದು.

**ರಾಜ.**—(ಮಂತ್ರಿಗಳನ್ನು ಕುರಿತು) ತಮ್ಮ ಅಭಿಪ್ರಾಯವೇನು ?

**ಮೊದಲನೆಯ ಪ್ರಧಾನಿ.**—ಕುಮಾರಿಯವರ ಉದ್ದೇಶವು ಶ್ಲಾಘ್ಯವಾದುದೇ ಸರಿ. ಅವರು ಅದನ್ನು ನಡೆಯಿಸಲೂ ಬಲ್ಲರು.

**ಎರಡನೆಯ ಪ್ರಧಾನಿ.**—ನನ್ನದೂ ಅದೇ ಅಭಿಪ್ರಾಯ.

**ಗುರು.**—(ರಾಜನಿಗೆ) ಎಲ್ಲರೂ ಒಪ್ಪಿರುವ ವಿಷಯವಾದುದರಿಂದ ನೀವು ಈ ವಿಷಯದಲ್ಲಿ ಹಿಂದೆಗೆಯಬೇಕಾದದ್ದಿಲ್ಲ.

**ರಾಜ.**—(ಕುಮಾರಿಗೆ) ನೀನು ಋಷಿಯ ಆಗ್ರಹಕ್ಕೆ ಎಲ್ಲಿಯಾದರೂ ಪಾತ್ರ ಳಾದೀಯೆ ಎಂದು ನನಗೆ ಶಂಕೆ.

**ಚಂಚಲಾ.**—ಅಂತಹ ಭಯವನ್ನು ಬಿಡಿ, ತಂದೆಯೇ. ನಾನು ಅವರ ಇಷ್ಟಾನುಸಾರವಾಗಿ ನಡೆದುಕೊಳ್ಳುತ್ತ ಅವರು ಇಲ್ಲಿಗೆ ಬರು ವುದು ಹೇಗೋ ಹಾಗೆ ಮಾಡುತ್ತೇನೆ.

**ಗುರು.**—ಅದು ಸರಿ. ಇದನ್ನು ಸ್ತ್ರೀಯರಿಗೆ ಹೇಳಿಕೊಡಬೇಕೆ ?

**ರಾಜ.**—ಹಾಗಾದರೆ ನಿನ್ನ ಇಷ್ಟದಂತೆ ಮಾಡು ತಾಯಿ. **(ಗುರುವಿಗೆ)** ಇವರು ಯಾವಾಗ ಹೊರಡಬಹುದು?

**ಗುರು.**—ಈ ದಿನ ಸುದಿನ. ಇಂದೇ ಸಾಧ್ಯವಾದಷ್ಟು ಬೇಗ ಹೊರಡಬಹುದು.

**ಚಂಚಲಾ.**—ಇಂದೇ ಹೊರಡುತ್ತೇನೆ. ಪೂಜ್ಯರಿಗೆ ವಂದನೆ. ತಂದೆಯೇ ನಾನು ಹೋಗಿಬರುತ್ತೇನೆ. ಆಶೀರ್ವಾದ ಮಾಡಬೇಕು.

**ರಾಜ.**—ಕಂದಾ ದೇವರು ನಿನಗೆ ಮಂಗಳವನ್ನು ಕೊಡಲಿ; ನಿನ್ನ ಕಾರ್ಯವು ಸಿದ್ಧಿಸಲಿ.

**(ಕಂದ)**

ಸೆರವಕ್ಕೆ ನಿನ್ನ ಕಾರ್ಯದಿ
ಸಿರಿಯುರಸಂ ಲೋಕನಾಥನೆಲ್ಲರಪೊರೆವಂ
ಅರಗಿಳಿ ಮಧುಮಾಸವ ತಾಂ
ತರುವಂದದಿ ಕುವರಿ ತಾರ ಋಷಿಕುವರನ ನೀಂ ॥

**(ಪರದೆ ಬೀಳುವುದು)**

## ಎರಡನೆಯ ಸ್ಥಾನ

ಋಷ್ಯಶೃಂಗನ ಆಶ್ರಮದ ಸಮೀಪ.

**ಋಷ್ಯಶೃಂಗನು ಬರುವನು**

**ಋಷ್ಯಶೃಂಗ.—** (ವೃತ್ತ)

ವನಮೆಲ್ಲಂ ಮಧುಮಾಸಮೈತರುತಿರಲ್ ತಾಂ ದೂರದಿಂ ಸಾರಿತಂ
ದಿನಿವಣ್ಣಂ ಕೊಡೆವರ್ಪತಾತನನು ನೋಳ್ಪಾನಂದದಿಂ ನಂದನಂ
ಕೊನೆವಂತೀ ನವಪಲ್ಲವಾಗಮದ ಪೆರ್ಚಿಂ ತೋರ್ಕುವೋರೊರ್ಮೆಗಂ
ಮನಮಂ ಸೋಲಿಪ ಮೋಹಮಂ ತರುವುದೆಂತೋ ಈ ವಸಂತಾಗಮಂ॥

ಈ ವನವು ಈ ಹದಿನೈದು ದಿನದಲ್ಲಿ ಎಂತಹ ಮನೋಹರಾಕಾರವನ್ನು ತಾಳಿದೆ. ಒಂದೊಂದು ಸಲವೂ ಇದೇ ಲಾವಣ್ಯವು ವನಪ್ರದೇಶವನ್ನೆಲ್ಲ ಹೊದೆಯುವುದು. ಒಂದೊಂದುಸಲವೂ ಅದು ಕಣ್ಣಿಗೆ ಹೊಸದು ಎಂಬಂತೆ ತೋರುವುದು. ಇದು ಭಗವಂತನ ಮಾಯೆಯೇ ಸರಿ. (ಎಂದು ಸ್ವಲ್ಪ ಯೋಚಿಸಿ) ನನಗೆ ಇಷ್ಟು ಆನಂದವನ್ನು ಕೊಡುವ ಈ ಸೌಂದರ್ಯವೆಲ್ಲವನ್ನೂ ತಂದೆಯವರು ಕೇವಲ ನನ್ನ ಭಾವನೆಯಲ್ಲಿ ಮಾತ್ರ ಇರತಕ್ಕದ್ದೆಂದು ಹೇಳುವರು. ಅವರು ಇದನ್ನು ಎಷ್ಟೋ ಸಲ ನನಗೆ ಚರ್ಚೆಯಲ್ಲಿ ತಿಳಿಯಹೇಳಿರುವರಾದರೂ ನನ್ನ ಅಂತರ್ಯವು ಇದನ್ನು ಒಪ್ಪಲಾರದೆ ಇದೆ. ಭಾವವಿಲ್ಲದೆ ಈ ಸೊಬಗು ಇಲ್ಲ ನಿಜ; ಆದರೆ ಭಾವದಂತೆ ಇಲ್ಲಿ ಏನೋ ಒಂದು ಇರುವುದರಿಂದಲ್ಲವೆ ಕಂಡೆನೆಂಬ ಭಾವ ಹುಟ್ಟುವುದು. ಇದನ್ನು ಮತ್ತೆ ಯೋಚಿಸಬೇಕು. (ಎಂದು ಸ್ವಲ್ಪ ಮುಂದಕ್ಕೆ ಬಂದು) ತಂದೆಯವರು ಬೇಗ ಬಂದರೆ ಇದ್ದೀತು. ಶ್ರಾವಣಮಾಸಕ್ಕೆ ಬರುವೆನೆಂದರು. ಇನ್ನು ನಾಲ್ಕುತಿಂಗಳು ಕಾಯಬೇಕು. ಜಾಬಾಲಿಯವರು ಇಲ್ಲವೆ ಇನ್ನು ಯಾರಾದರೂ ಬಂದರೆ ಸ್ವಲ್ಪ ಜತೆಯಾದ ಹಾಗಾಯಿತು ಸ್ವಲ್ಪ ವಿಷಯಗಳನ್ನೂ ತಿಳಿದುಕೊಳ್ಳ

ಬಹುದು. ಯಾರೂ ಬರಲಿಲ್ಲ. ಧ್ಯಾನಕ್ಕೆ ಕುಳಿತುಕೊಳ್ಳೋಣ ವೆಂದರೆ ಈ ವನದಲ್ಲಿ ಸುಳಿಯುವ ಈ ಗಾಳಿಗಳ ಕೊಳಲ ಗಾನದಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲಲಾರದು. ಏನು ಮಾಡುವುದು (ಎಂದು **ಸುತ್ತಲೂ ನೋಡಿ**)ಈ ವನದಲ್ಲಿ ಇಷ್ಟೊಂದು ಸುರಯಿಾವೃಕ್ಷಗಳಿರುವು ವೆಂಬುದು ಹತ್ತುದಿನದ ಹಿಂದೆ ಯಾರಿಗೂ ತೋರಿ ಇದ್ದಿರಲಾ ರದು. ಈಗ ವನವೆಲ್ಲ ಸುರಯಿಾಮಯವಾಗಿ ತೋರುತ್ತಿದೆ. ಇದು ನ್ಯಾಯ. ಪರಮಾತ್ಮನು ಹೃದಯದಲ್ಲೇ ಇದ್ದರೂ ಸರಿಯಾದ ಸಮಯ ಬಂದು ಮನಸ್ಸು ವಿಕಸಿಸುವವರೆಗೆ ಅವನು ಅಲ್ಲಿ ಇರು ವನೆಂಬುದೇ ತೋರುವುದಿಲ್ಲ. ವಿಕಾಸವಾದ ಮೇಲೆ ಎಲ್ಲೆಡೆ ಯಲ್ಲಿಯೂ ಅವನೇ. (**ಎಂದು ರಂಗದ ಒಂದುಕಡೆಗೆ ನೋಡುತ್ತಾ**) ನಿನ್ನೆಯ ಸಾಯಂಕಾಲ ಆ ಗಾನವು ಕೇಳಿ ಬಂದದ್ದು ಈ ಕಡೆಯಿಂದಲೇ. ಆಹಾ, ಅದೆಷ್ಟು ಇಂಪಾದ ಗಾನ. ನಾನು ಧ್ಯಾನದಲ್ಲಿ ಕುಳಿತಿದ್ದು ಮತ್ತೆ ಎಚ್ಚರಗೊಳ್ಳುವ ವೇಳೆಗೆ ಸಂಧ್ಯಾಮಾರುತನೊಂದಿಗೆ ಸೇರಿ ಸುಖದ ತರಂಗಗಳ ಮಾಲೆಯಂಬಂತೆ ಹಾಯ್ದು ಬಳಿಗೆ ಬಂದಿತು. ಅಂತಹ ಸಮಯದಲ್ಲಲ್ಲವೇ ಪರಮಾತ್ಮನು ಆನಂದಮಯನೆಂದು ತೋರುವುದು. ಈ ಸ್ಥಳವು ಬಹಳ ಚೆನ್ನಾಗಿದೆ. ಇಲ್ಲಿ ಸ್ವಲ್ಪ ಕುಳಿತುಕೊಳ್ಳುವೆನು. ಧ್ಯಾನಕ್ಕೂ ಅನುಕೂಲವಾಗಿದೆ. (ಎಂದು **ಒಂದುಕಡೆ ಹೋಗಿ ಕುಳಿತುಕೊಳ್ಳುವನು. ಚಂಚಲಕುಮಾರಿಯೂ ಕೆಳದಿ ಯರೂ ಬರುವರು.**)

**ಸುಖಲತಾ.**—ಈ ಸ್ಥಳವು ನಿನ್ನೆ ಇದ್ದುದಕ್ಕಿಂತ ಈಗ ರಮ್ಯವಾಗಿ ತೋರು ವುದು.

**ಸುಂದರಿ.**—ಅದು ಒಂದೊಂದು ಸಲವೂ ಹಾಗೆಯೇ ತೋರುವುದು.

**ಲಲಿತಾ.**—ಹಾಗಲ್ಲ. ನಿನ್ನೆಯ ದಿನ ಚಂದ್ರನು ಇನ್ನೂ ಚಿಕ್ಕವನಾಗಿದ್ದುದ ರಿಂದ ನಿಶಿಯ ಮನಸ್ಸು ಸೋಲಲಿಲ್ಲ. ಪ್ರೇಮಭರದಿಂದ ಸಂಜೆಯು ಮುಗ್ಧವಾಗದಿದ್ದರೆ ಸುಖಲತೆಗೆ ಆ ಸ್ಥಳವೂ ಸಮಯವೂ ರುಚಿಸುವುದಿಲ್ಲ.

ಸುಖಲತಾ.—ನೀನು ತಿಳಿದವಳು ಹೇಳಿಬಿಟ್ಟೆಯಲ್ಲಾ. ಇನ್ನೇನು ?

ಲಲಿತಾ.—ಹಾಗಾದರೆ ನಾನು ತಿಳಿದವಳಲ್ಲ. ತಿಳಿದವಳು ನೀನೇ ಹೇಳು.

ಸುಖಲತಾ.—ನಾನು ಹೇಳುವುದಿಲ್ಲ. ನನಗೆ ಈ ಒಯ್ಯಾರದ ಮಾತು ಬರುವುದಿಲ್ಲ.

ಲಲಿತಾ.—ನಿನಗೆ ಮಾತು ಬರುವುದಿಲ್ಲ. ಒಯ್ಯಾರವೇ ಬೇಕಾದಷ್ಟು ಬರುತ್ತದೆ.

ಸುಂದರಿ.—ಇದೇನು ನಿನ್ನ ಬಿಂಕ. ಇನ್ನು ಒಂದು ವರ್ಷವಾದರೆ ನೀನೂ ಅವಳ ಹಾಗೆಯೇ ಆಗುತ್ತೀಯೆ. ಇರು. ಅಂತು ನಿನ್ನೆಗಿಂತ ಈ ದಿನ ಈ ಸ್ಥಳ ಚೆನ್ನಾಗಿ ಕಾಣುತ್ತದೆ. ಅದೇನೋ ನಿಜ.

ಸುಖಲತಾ.—ನೋಡಿದೆಯಾ ? ಅದನ್ನೇ ನಾನು ಹೇಳಿದ್ದು.

ಚಂಚಲಾ.—ಏನು ಹೇಳಿದೆ, ಸುಖಾ ?

ಸುಂದರಿ.—ನಾವು ಇಷ್ಟು ಸ್ವಾರಸ್ಯವಾಗಿ ಮಾತನಾಡುತ್ತಿದ್ದರೆ ಅದನ್ನು ಕೇಳದೆ ನೀನು ಯಾವ ಯೋಚನೆಯನ್ನು ಮಾಡುತ್ತಿದ್ದೆ ?

ಚಂಚಲಾ.—ನೀವು ನನ್ನನ್ನು ಬಿಟ್ಟು ಮುಂದೆ ಮುಂದೆ ಹೊರಟುಹೋದರೆ ನನಗೆ ಮಾತು ಹೇಗೆ ಕೇಳಿಸುವುದು ?

ಸುಂದರಿ.—ನಿನ್ನ ನಡೆ ಬರಬರುತ್ತ ಬಹಳ ಮೆಲ್ಲಗಾಗಿ ಹೋಯಿತು.

ಚಂಚಲಾ.—ನಾನು ನಿನ್ನ ಯುವಕನಾಗಿದ್ದಿದ್ದರೆ ನೀನು ನನ್ನನ್ನು ಅನುಸರಿಸುತ್ತಿದ್ದೆ. ನಡೆ ಮೆಲ್ಲಗಾದರೂ ಬಿಡುತ್ತಿರಲಿಲ್ಲ. ನಾನು ಯುವತಿಯಾದುದರಿಂದ ಇಷ್ಟು ಅಲಕ್ಷ್ಯ.

ಸುಂದರಿ.—ನೀನೂ ಇಂದೋ ನಾಳೆಯೋ ಯುವಕನಾಗುವೆಯಲ್ಲ.

ಚಂಚಲಾ.—ನೀನು ಆಗ ನನ್ನನ್ನು ವರಿಸುವೆಯೋ ?

ಸುಂದರಿ.—ಆಗಬಹುದು. ಊರಲ್ಲಿದ್ದಿದ್ದರೆ ಸರಿಯಾದ ವರನು ಬರುವನೆಂದು ಕಾಯಬಹುದಾಗಿತ್ತು. ಕಾಡಿಗೆ ಬಂದದ್ದಾಯಿತು. ಇಲ್ಲಿ ನಾವೇ ವೇಷಗಳನ್ನು ಹಾಕಿಕೊಂಡು ಒಬ್ಬರನ್ನೊಬ್ಬರು ವರಿಸಬೇಕು.

**ಲಲಿತಾ.**—ಆ ಮಾತನ್ನು ನಮಗೆ ಹೇಳಬಹುದು. ನಿನಗೆ ಅವಶ್ಯಕವಿಲ್ಲ. ನಿನಗೆ ತಕ್ಕ ಗಂಡನನ್ನು ಹಿಡಿಯುವುದು ಇಲ್ಲಿ ಕಷ್ಟವಿಲ್ಲ.

**ಚಂಚಲಾ.**—ಅದೇನು ?

**ಸುಂದರಿ.**—ಅದೇನು ನನಗೆ ಒಬ್ಬ ಗಂಡನನ್ನು ತರುವುದು ಅಷ್ಟು ಸುಲಭ?

**ಲಲಿತಾ.**—ಸುಲಭವೇ. ಯಾವುದಾದರೂ ಒಂದು ಕರಡಿಯನ್ನು ತಂದರಾಯಿತು.

**ಸುಂದರಿ.**—(**ಅವಳನ್ನು ಹಿಡಿಯುವುದಕ್ಕೆ ಕೈನೀಡಿ**) ಆಗಲಿ ಇರು ನೀನು ಸಿಕ್ಕಿದಾಗ ಮಾಡುತ್ತೇನೆ (**ಎಂದು ಉಳಿದವರಿಗೆ**) ಇಲ್ಲಿ ಚೆನ್ನಾಗಿದೆ. ಕುಳಿತುಕೊಳ್ಳೋಣ. (**ಎಂದು ಒಂದುಕಡೆ ಕುಳಿತುಕೊಳ್ಳುವಳು.**)

**ಚಂಚಲಾ.**—(**ಕುಳಿತುಕೊಂಡು**) ನಮ್ಮೂರಲ್ಲಿ ಹಸುರುಗಿಡವನ್ನೇ ಕಾಣದ ಕಣ್ಣಿಗೆ ಈ ವನವು ನಂದನ ವನದಂತೆ ಕಾಣುತ್ತದೆ.

**ಸುಂದರಿ.**—ಅಲ್ಲಿ ಹಸುರುಗಿಡ ಇದ್ದರೂ ನೋಡುವ ಸಮಾಧಾನ ಯಾರಿಗೂ ಇಲ್ಲ. ಇಲ್ಲಿಗೆ ಬಂದುದು ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಗಿದೆ.

**ಚಂಚಲಾ.**—ನೆಮ್ಮದಿಯೇನೊ? ನನಗೆ ದುಃಖವಾಗುತ್ತದೆ. ಇದೆಲ್ಲವೂ ಬೇಕೆನ್ನುವ ಜೀವ ಇರುವಕಡೆ ದೇವರು ಈ ಮಳೆಯನ್ನು ಕೊಡುವುದಿಲ್ಲ. ಇಲ್ಲಿ ಕೇಳುವರಿಲ್ಲದಕಡೆ ವಿತರಣೆ ಬಹಳವಾಗಿದೆ. ಈ ಕಾಲುವೆಯಲ್ಲಿ ನೀರು ಹರಿಯುತ್ತಿರುವಂತೆ ನಮ್ಮೂರ ಬಳಿಯ ಹೊಳೆಯಲ್ಲಿ ನಾವು ನೀರನ್ನು ಎಂದಿಗೆ ನೋಡುವೆವೋ ?

**ಲಲಿತಾ.**—(**ಹತ್ತಿರ ಬಂದು ಕುಳಿತಿದ್ದವಳು**) ಯಾವಾಗಲೂ ಮಳೆ ಬೆಳೆ ಮಾತನಾಡುವುದಕ್ಕೆ ನೀವೇನು ರೈತರೇ ? ನಾವು ಬಹಳ ದಿನ ಇಲ್ಲೇ ಇದ್ದುಬಿಟ್ಟರೆ ನಮ್ಮ ಅಪ್ಪ ಅಮ್ಮ ಬಿಡುವ ಕಣ್ಣೀರೇ ಕಾಲುವೆಯಲ್ಲಿ ಹರಿಯುತ್ತದೆ. ಕಾಲುವೆಯಲ್ಲಿ ನೀರಿಗೇನು ?

**ಸುಂದರಿ.**—ನೀನು ಇಷ್ಟು ಸವಿಯಾಗಿ ಮಾತನಾಡುತ್ತಿದ್ದರೆ ಪಕ್ವವಾಗುವುದಕ್ಕೆ ಮುಂಚೆಯೇ ನಿನ್ನನ್ನು ಯಾರೋ ಬಾಯಿಗೆ ಹಾಕಿಕೊಳ್ಳುವರು.

**ಲಲಿತಾ.**—ಒಳ್ಳೆಯದಾಯಿತು. ಕಳಿತು ಕೆಳಕ್ಕೆ ಬಿದ್ದು ಹೋಗುವುದಕ್ಕಿಂತ ಮೇಲು.

**ಸುಖಲತಾ.**—ಈ ಲಲಿತಾ ಯಾವಾಗಲೂ ಹೀಗೆಯೇ. ಎಲ್ಲರ ಕೂಡಲೂ ಜಗಳವಾಡುವುದು. ಎಲ್ಲಿ, ಸುಂದರು, ಸ್ವಲ್ಪ ವಿನೋದವಾಗಿ ಕಾಲ ಕಳೆಯೋಣ, ಒಂದು ಹಾಡನ್ನು ಹೇಳು.

**ಸುಂದರಿ.**—ನೀನೇ ಹೇಳು.

**ಸುಖಲತಾ.**—ನೀನು ಹಿರಿಯಳು. ನೀನು ಹೇಳಿದರೆ ನಾವು ಆಮೇಲೆ ಹೇಳುವೆವು.

**ಚಂಚಲಾ.**—ಹೌದು ಸುಂದರು, ಒಂದು ಹಾಡನ್ನು ಹೇಳು. ಈ ಬೇಸರು ಹೋಗುವುದೇನೋ ನೋಡೋಣ.

**ಸುಂದರಿ.**—ನಿನ್ನ ಇಷ್ಟದಂತೆ ಆಗಲಿ ಚಂಚಲಾ (**ಎಂದು ಹಾಡುವಳು**).

(**ರಾಗ : ಮೋಹನ**)

ಎಂತು ನಾನು ಬಣ್ಣಿಸಲಿ ವ-
ಸಂತನ ಈ ಪೊಸಬೆಡಗನು ॥

ನೇಸರ ಪೊಂಬೆಳಗಿಗೊಂದು
ಹೊಸ ಕಾಂತಿಯು ಮೆರುಗು ನೆರೆಯೆ
ಬೀಸುವ ತೆಂಗಾಳಿಯು ಮೆಲು
ನಡೆಯೊಳು ಹೊಸ ಸೊಗವು ಬೆರೆಯೆ
ಹಾಸಗಳೆನೆ ಸುಮರಾಜಿಯು
ವನಸುಂದರಿ ಧರಿಸಲೀ ಮಧು
ಮಾಸವು ತಾ ಒರುತಲಿಹುದು
ನವವೆನಿಸುವ ಸೊಬಗಿನಿಂದೆ ॥

ಕಲಕಂಠನ ಸುಖವಾಣಿಯು
ಸಾರಿ ಎಲರಸೀಳೆ ಬರಲು

ಗಿಳಿಯ ಸಾಲು ಆಗಸದಲಿ
ಎಸೆಯೆ ಚೈತ್ರ ತೋರಣದೊಲು
ಲಲಿತ ಪಲ್ಲವೋತ್ಕರದಿಂ
ರತ್ನಖಚಿತವಾಗೆ ವನವು
ಸುಲಭದೊಳೇ ಎಲ್ಲ ಜಗವ
ಜಯಿಸುತೆ ಮಧು ಬರುತಲಿಹನು ||

ಆಗಸವನು ತೀವಿರುವೀ
ಪೊಸಬೆಳಗೂ ಕಲನಾದವು
ವೇಗದಿಂದ ಓಡುವ ಈ
ಗಿಳಿವಿಂಡಿನ ಸೊಗಸು ಪುಷ್ಯ-
ರಾಗನೀಲಗಳೊಲು ತೋರ್ಪ
ತಳಿರ ನಿಚಯ ಮನದಲಿ ಅನು-
ರಾಗಲತೆಯ ಮೊಳೆಸಿನಿಲಿಸೆ
ನೋಡುತೆ ಮಧು ನಗುತಲಿಹನು ||

**ಚಂಚಲಾ.**—ಆಹಾ! ಬಹಳ ಚೆನ್ನಾಗಿ ಹಾಡಿದೆ ಸುಂದರು.

**ಸುಖಲತಾ.**—ಬಹಳ ಚೆನ್ನಾಗಿತ್ತು.

**ಲಲಿತಾ.**—ಹೌದು. ಸುಂದರು ಮಾತನಾಡಿದರೆ ಅಷ್ಟು ಚೆನ್ನಾಗಿರುವುದಿಲ್ಲ. ಹಾಡಿದರೆ ಬಹಳ ಚೆನ್ನಾಗಿರುತ್ತೆ.

**ಸುಂದರಿ.**—ಈ ಸೊಗಸಲ್ಲೆಲ್ಲ ಹಾಡುವವರ ಶಕ್ತಿ ಸ್ವಲ್ಪ, ಕೇಳುವವರ ವಿಶ್ವಾಸ ಹೆಚ್ಚು.

**ಲಲಿತಾ.**—ಇಗೊ ನೋಡಿದೆಯೋ ಇದೇ ಬುದ್ಧಿ! ಜನ ಚೆನ್ನಾಗಿದೆ ಎಂತ ಹೇಳುವುದು ಅಪೂರ್ವ. ಹೇಳಿದಾಗ ಸ್ತೋತ್ರವನ್ನು ತೆಗೆದುಕೊಂಡು ಸುಮ್ಮನಿರಬೇಕು. ಅದನ್ನು ಬಿಟ್ಟು ಮರ್ಯಾದೆಗೆ ನಿಮ್ಮ ವಿಶ್ವಾಸ ಹಾಗೆ ಹೀಗೆ ಎಂದರೆ ಅವರೂ ಹಾಗೆಯೇ ತಿಳಿದುಕೊಂಡುಬಿಡುತ್ತಾರೆ. ಚೆನ್ನಾಗಿತ್ತು ಎಂದೆವಲ್ಲ. ಸುಮ್ಮನಿರು.

**ಸುಂದರಿ.**—ಅಪ್ಪಣೆ ಲಲಿತಾ.

**ಚಂಚಲಾ.**—ಸುಖಿ ಈಗ ನೀನು ಹಾಡಬೇಕು.

**ಸುಖಲತಾ.**—ಏನನ್ನು ಹಾಡಲಿ? ಯಾವುದನ್ನಾದರೂ ಜ್ಞಾಪಕ ಮಾಡಿ ಕೊಡು.

**ಸುಂದರಿ.**—ನಿನ್ನ ಮನಸ್ಸು ಹೇಗೆ ಹೋಗುತ್ತದೋ ಹಾಗೆ ಹಾಡು. ಇದನ್ನೆಲ್ಲ ಇನ್ನೊಬ್ಬರು ಹೇಳಿಕೊಡಬೇಕೆ?

**ಸುಖಲತಾ.**—ಈ ದಿನ ನನ್ನ ಮನಸ್ಸು ಎಲ್ಲಿ ಹೋಗಿರುವುದೋ ನನಗೆ ತಿಳಿಯದಂತೆ ಇದೆ.

**ಲಲಿತಾ.**—ಅದನ್ನೇ ಹಾಡಿ ಹೇಳು.

**ಸುಖಲತಾ.**—ಆ ಹಾಡು ಯಾವುದೂ ಇಲ್ಲವಲ್ಲ.

**ಲಲಿತಾ.**—ನೀನು ಈಗ ರಚಿಸಿ ಹೇಳು.

**ಸುಖಲತಾ.**—(ಸ್ವಲ್ಪ ಯೋಚಿಸಿ) ಹೇಳುತ್ತೇನೆ. ಚೆನ್ನಾಗಿಲ್ಲದಿದ್ದರೆ ಕೋಪಿಸ ಬೇಡಿ. ಆದರೆ ನಾನು ಹೇಳುವುದು ನನ್ನ ಮನಸ್ಸಲ್ಲ ಚಂಚಲೆಯ ಮನಸ್ಸನ್ನು (ಎಂದು ಹಾಡುವಳು).

(ರಾಗ : ಆನಂದಭೈರವಿ)

ಎಲ್ಲಿ ಪೋದುದೋ ಮನವು
ಏನಾದುದೋ ॥

ಲಲಿತಾ, ಪಲ್ಲವಿಯನ್ನು ನಾನು ಹೇಳಿದ ಮೇಲೆ ನೀನೂ ಹೇಳು. ನನಗೆ ಮಾತು ಸುಲಭವಾಗಿ ಬರುವುದು.

**ಲಲಿತಾ.**—ಆಗಲಿ ಹೇಳು.

**ಸುಖಲತಾ.**— ಎಲ್ಲಿ ಪೋದುದೋ ಮನವು
ಏನಾದುದೋ

**ಲಲಿತಾ.**— ಎಲ್ಲಿ ಪೋದುದೋ ಮನವು
ಏನಾದುದೋ

**ಸುಖಲತಾ.—** ಎಲ್ಲಿ ಪೋದುದೋ ಮನವು
ಎಲ್ಲಿ ಅಲೆವುದೋ
ಎಲ್ಲಿ ತೊಳಲುತಿಹುದೊ ಮನವು
ಏನಾದುದೋ

**ಲಲಿತಾ.—** ಎಲ್ಲಿ ಪೋದುದೋ ಮನವು
ಏನಾದುದೋ

**ಚಂಚಲಾ.**—ನನ್ನ ಮನಸ್ಸು ಏನಾಯಿತೆಂದು ನನಗೆ ಸಂದೇಹವಿಲ್ಲ. ನಿನ್ನ ಮನಸ್ಸಿನ ಮಾತನ್ನು ನೀನು ಹೇಳಬಹುದು.

**ಸುಖಲತಾ.**—ಮನಸ್ಸು ಹೋದದ್ದೆಲ್ಲ ಒಂದು. ಯಾರ ಮನಸ್ಸಾದರೆ ಏನು (**ಹಾಡುವಳು**).

ಗಾಳಿಯೊಂದು ದೂರದಿಂದ
ಸಾರಿಬಳಿಗೆ ಬಂದು ನಿಂದು
ಸಾರುವೆನಾಂ ಹೂಗಳೊಡನೆ
ಕೇಳಿಯಾಡಲೆಂದು ಎನಲು
ಕೇಳದೆನ್ನ ಎನ್ನಮನ
ಸಾರಿತದರ ಜತೆಗೆ ತಾನು
ತೂರಿ ಓಡಿ ವನದೊಳೆಲ್ಲ
ಗಾಳಿಯೊಡನೆ ಅಲೆಯುತಿಹುದು ||

**ಲಲಿತಾ.—** ಎಲ್ಲಿ ಪೋದುದೋ ಮನವು
ಏನಾದುದೋ

**ಸುಖಲತಾ.—** ಎಲ್ಲಿ ಪೋದುದೋ ಮನವು
ಏನಾದುದೋ

**ಚಂಚಲಾ.**—ಸುಖು ಬಹಳ ಜೆನ್ನಾಗಿದೆ.

**ಲಲಿತಾ.**—ಏಕೆ? ಆಗಿಹೋಯಿತೆ?

ಸುಖಲತಾ.—ಆಗಿಹೋಗದೆ ನಾನೇನು ಅದನ್ನು ಸುರುಳಿ ಸುತ್ತಿ ಇಟ್ಟು ಕೊಂಡಿದ್ದೇನೆ? ಕವನವೊ ಮತ್ತೊಂದೊ?

ಲಲಿತಾ.—ಏಕೆ? ಕೋಗಿಲೆಯ ಜತೆಗೆ ಹೋಯಿತು ಎಂತ ಹೇಳು. ಕೋಗಿಲೆಗೆ ಏನೂ ಕಡಿಮೆ ಇಲ್ಲವಲ್ಲ.

ಸುಖಲತಾ.—ನನಗೆ ಕೋಗಿಲೆ ಎಂದರೆ ಆಗುವುದಿಲ್ಲ.

ಚಂಚಲಾ.—ಇದೇನು ಬಂತು?

ಸುಖಲತಾ.—ಅದು ಕೂಗಿದರೆ ನನಗೆ ಮೈ ಝುಮ್ಮೆನ್ನುತ್ತದೆ.

ಸುಂದರಿ.—ಅದು ಈ ವಯಸ್ಸಿನ ಮಹಿಮೆ. ಕೋಗಿಲೆ ಏನುಮಾಡೀತು? ಈಗ ಕೋಗಿಲೆ ಕೂಗಿದರೂ ಕೋಳಿ ಕೂಗಿದರೂ ನಿನ್ನ ಮೈ ಒಂದೇ ಸಮವಾಗಿ ಝುಮ್ಮೆನ್ನುತ್ತದೆ. ಪ್ರಿಯನು ಕೂಗಿದರೆ ಹೇಳಬೇಕಾದದ್ದಿಲ್ಲ.

ಲಲಿತಾ.—ಏನೋ ಬಹಳ ಪರಿಶ್ರಮದಿಂದ ಮಾತನಾಡುವಂತಿದೆ.

ಸುಂದರಿ.—ಹೌದು. ನಿನ್ನಂತಹ ಸಖಿಯರು ಬಹುಜನರನ್ನು ನಾನು ನೋಡಿ ಬಲ್ಲೆ.

ಚಂಚಲಾ.—(ಲಲಿತೆಗೆ) ಸುಂದರು ನಿನಗೆ ಸೋಲುವಳೆ?

ಲಲಿತಾ.—ಸುಖಿ ಇನ್ನೊಂದು ನುಡಿ ಹೇಳಿದ್ದರೆ ನಾನು ಪಲ್ಲವಿಯನ್ನು ಇನ್ನೊಂದು ಸಲ ಹಾಡಬಹುದಾಗಿತ್ತು. ಈಗ ಅದಿಲ್ಲದೆ ಹೋಯಿತು ಅಷ್ಟೆ.

ಸುಖಲತಾ.—ಪಲ್ಲವಿಯೆ? ನೀನು ಒಂದು ಹಾಡನ್ನು ಹೇಳಬೇಕಲ್ಲ.

ಲಲಿತಾ.—ಅದೇನು? ನನ್ನನ್ನೇನಾದರೂ ಮೊದಲು ಕೇಳಿದಿರಾ?

ಸುಂದರಿ.—ಇರಲಿ ಹೇಳು ಹುಡುಗಿ. ನಮ್ಮ ಕಂಠ ಚೆನ್ನಾಗಿಲ್ಲದ್ದನ್ನು ಕಂಡುಹಿಡಿದು ತಾನು ಮಾತ್ರ ಬಚ್ಚಿಟ್ಟುಕೊಳ್ಳುತ್ತಾಳೆ.

ಲಲಿತಾ.—ನನ್ನ ಕಂಠ ಚೆನ್ನಾಗಿಯೇ ಇದೆ.

ಸುಂದರಿ.—ಹಾಗಾದರೆ ಹೇಳು.

**ಚಂಚಲಾ.**—ಹೇಳು ಲಲಿತಾ.

**ಲಲಿತಾ.**—(ಹಾಡುವಳು)

(ರಾಗ : ಜಂಗಲ)

ಸುರಯಿಯ ಮರದಲಿ ಪುರಿತಾರಗೆಯೊಲು
ಅರಳಿದ ಹೂತುರುಗಿ
ಮೆರೆಯುತೆ ಇರಲದ ಅರಸುತೆ ಅಲರುಣಿ
ಹಿಂಡುಹಿಂಡು ಬಂದು
ಅರಸಿದ ಆಮರ್ದಿಸ ಸರಸ ಕಲಶವನು
ಕಂಡೆವು ನಾವಿಂದು
ಸರಸಿಗಳೆಲ್ಲರು ಬರುವುದು ಎನ್ನುತೆ
ಮೊರೆದು ಕರೆಯುತಿಹುದು ||

**ಚಂಚಲಾ.**—ಬಹಳ ಚೆನ್ನಾಗಿದೆ.

**ಲಲಿತಾ.**—(ಹಾಡುವಳು)

ಸೊಗದಸಾಗರವು ಮೇರೆಯ ಮೀರಿ
ಹರಿದು ಬಂದುದೆನಲು
ಜಗದ ಎಲ್ಲೆಡೆಯು ಸುಖದ ತರಂಗದಿ
ಮರೆದೋಲಾಡುತಿದೆ
ಸೊಗಯಿಪ ಸೋಂಕಿನ ಮೆಲ್ನಡೆ ನುಡಿಯಲಿ
ಸರಸದಿ ಮೆಲ್ಲೆಲರು
ಮೊಗವನು ಕಣ್ಣನು ಮುತ್ತುತೆ ಕುರುಳನು
ಸರಸದೊಳಲೆಸುವುದು ||

**ಸುಖಲತಾ.**—ಇವಳಿಗೆ ಇಷ್ಟು ಬೇಗ ಇದೆಲ್ಲಾ ಹೇಗೆ ತಿಳಿಯಿತು?

**ಲಲಿತಾ.**—(ಹಾಡುವಳು)

ಹರಿಸವು ಇಂತು ಜಗವತೀವಿರಲು
ಎನ್ನ ಮನವು ಎನ್ನ

ಅರಿಯದೆ ಸೊಗಸಿನ ರಸವನೀಂಟುತ
ತನ್ನನೆ ಮರೆದಿಹುದು
ಮರುಗೆನದೆನ್ನನು ತೊರೆದುದೆನ್ನುತ
ಎನ್ನ ಮರೆದೊಡೇನು
ಮರಲೆಲರೊಡನದು ಕೊನೆಗೆ ಸೇರುವುದು
ಚೆನ್ನನ ಅಡಿಗಳನು ||

**ಸುಂದರಿ.**—ಲಲಿತಾ ಕೂಡಾ ಮಾತನಾಡಿದರೆ ಅಷ್ಟು ಚೆನ್ನಾಗಿಲ್ಲ. ಹಾಡಿದರೆ ಚೆನ್ನಾಗಿದೆ.

**ಸುಖಲತಾ.**—(ನಗುತ್ತಾ) ಚೆನ್ನನು ಯಾರು?

**ಲಲಿತಾ.**—ಅವನು ಯಾರು ಎಂದು ಹಿರಣ್ಯಕಶಿಪು ಕೇಳುತ್ತಿದ್ದಂತೆ ನೀನೂ ಕೇಳುತ್ತಿದ್ದರೆ ನೀನೂ ಒಂದು ದಿನ ಅವನನ್ನು ಕಾಣುವೆ.

**ಸುಖಲತಾ.**—ಯಾರನ್ನು?

**ಲಲಿತಾ.**—ನಖದಂಷ್ಟ್ರಾಯುಕ್ತನಾದ ನಿನ್ನ ನರಸಿಂಹನನ್ನು.

**ಸುಂದರಿ.**—ಚಂಚಲಾ ಈಗ ನೀನು ಹಾಡುವ ಸರ್ತಿ.

**ಚಂಚಲಾ.**—ನಾನು ಈಗ ಹಾಡಲಾರೆ ಸುಂದರು. ಇನ್ನು ಯಾವಾಗಲಾದರೂ.

**ಸುಂದರಿ.**—ಇನ್ನು ಯಾವಾಗ? ಇಂದು ಸಂಜೆಗೆ ಆಶ್ರಮವನ್ನು ಸೇರಬೇಕಲ್ಲ.

**ಚಂಚಲಾ.**—ಆದರಿಂದಲೇ ನಾನು ಈಗ ಹಾಡಲಾರೆ. ಏನಾಗುವುದೋ ಏನೋ ಎಂದು ಮನಸ್ಸಿನಲ್ಲಿ ಯೋಚನೆ ಹೆಚ್ಚಾಗಿದೆ.

**ಸುಂದರಿ.**—ಬಿಡು ಹುಡುಗಿ ಏನು ಯೋಚನೆ? ಎಲ್ಲವೂ ಸರಿಹೋಗುವುದು.

**ಚಂಚಲಾ.**—ದೇವರ ದಯದಿಂದ ಹಾಗೆ ಆಗಲಿ.

**ಲಲಿತಾ.**—ಚಂಚಲೆ ಯೋಚಿಸುವುದೇನೆಂದು ಹೇಳಲೆ?

**ಚಂಚಲಾ.**—ಹೇಳು ನೋಡೋಣ (**ಎಂದು ಎದ್ದು ಹೊರಡುವರು**).

**ಲಲಿತಾ.**—ಋಷಿಕುಮಾರರಿಬ್ಬರಿದ್ದಿದ್ದರೆ ನನಗೊಬ್ಬನೂ ಸುಂದರಿಗೊಬ್ಬನೂ ಆಗಬಹುದಾಗಿತ್ತು. ಈಗ ಈ ಒಬ್ಬನನ್ನು ನಾವಿಬ್ಬರೂ ಮದುವೆಯಾದರೆ ಸುಂದರಿಗೆ ಅರ್ಧಕುಮಾರನನ್ನು ಕೊಡಬೇಕಲ್ಲಾ ಎಂದು.

**ಚಂಚಲಾ.**—ನೀವಿಬ್ಬರೂ ?

**ಲಲಿತಾ.**—ನನ್ನ ಭಾಗವನ್ನು ನೀನೂ ಸುಂದರಿಯೂ ಹಂಚಿಕೊಳ್ಳಿ. ಸುಖಿಯ ಭಾಗವನ್ನೂ ಅಷ್ಟೇ. ಅದಕ್ಕೇ ನಮ್ಮನ್ನು ಕಳುಹಿಸಿಬಿಟ್ಟು ನೀವಿಬ್ಬರೇ ಇರಬೇಕೆಂದು ಮಾಡಿದ್ದೀರಲ್ಲ.

**ಚಂಚಲಾ.**—ನೀನು ನಿಜವಾಗಿಯೂ ಹೀಗೆಂದುಕೊಂಡಿಲ್ಲವಷ್ಟೆ.

**ಸುಂದರಿ.**—ಸರಿ ಬಿಡು, ಚಂಚಲಾ, ಅವಳ ಮಾತೇನು. "ನಾವಿದ್ದರೆ ಸುಮ್ಮನೆ ಮಾತನಾಡುತ್ತೇವೆ. ನಾವು ಒರದೆ ದೂರ ಇರುವುದು ಒಳ್ಳೆಯದು" ಎಂದು ಅವಳೇ ಮೊದಲು ಹೇಳಲಿಲ್ಲವೆ ? (**ಋಷ್ಯಶೃಂಗನು ಧ್ಯಾನವನ್ನಿಳಿದು ಎದ್ದು ಬೇರೊಂದು ಕಡೆಯಿಂದ ಬರುವನು.**)

**ಲಲಿತಾ.**—ನೀನು ಹುಡುಗನ ವೇಷ ಹಾಕಿಕೊಂಡ ಮೇಲೆಯೇ ನಾವು ಹೋಗುವುದು.

**ಚಂಚಲಾ.**—ಆಗಲಿ.

**ಲಲಿತಾ.**—ನೀನು ನನಗೆ ಚೆನ್ನಾಗಿ ಒಂದು ಮುತ್ತು ಕೊಡಬೇಕು.

**ಚಂಚಲಾ.**—ಆಗಲಿ.

**ಲಲಿತಾ.**—ಅಷ್ಟೇ ನಾನು ಕೇಳುವುದು. ಎಲ್ಲಿ ನೀನು ಸ್ವಲ್ಪ ನಗು.

**ಚಂಚಲಾ.**—(**ನಗುತ್ತಾ**) ಸರಿಯೆ ?

**ಲಲಿತಾ.**—ಸರಿ, ನೀನು ಹೀಗೆ ನಗುತ್ತಾ ಋಷಿಕುಮಾರನನ್ನು ನೋಡಿದರೆ ಅವನ ಪಾಡು ಇನ್ನೇಕೆ ? (**ಎನ್ನುವ ಹೊತ್ತಿಗೆ ಋಷ್ಯಶೃಂಗನನ್ನು ಎದುರಿಗೆ ಕಂಡು**) ಅಯ್ಯೋ (**ಎಂದು ಪಲಾಯನ ಮಾಡುವಳು, ಎಲ್ಲರೂ ಚೆಲ್ಲಾಪಿಲ್ಲಿಯಾಗಿ ಓಡುವರು**).

**ಋಷ್ಯಶೃಂಗ.**—ಈ ಬಾಲಕರು ಯಾರೋ? ಇದೇಕೆ ಹೀಗೆ ಓಡಿಹೋದರು? ನಾನು ಧ್ಯಾನದಲ್ಲಿ ಇರುವಾಗ ಮಧ್ಯೆ ಯಾವಾಗಲೋ ಬಂದು ಇಲ್ಲಿ ಕುಳಿತರೆಂದು ಕಾಣುತ್ತದೆ. ನಿನ್ನೆ ಗಾನಮಾಡಿದವರೂ ಇವರೇ ಇರಬೇಕು. ನನಗೆ ಮೊದಲು ಅದು ಸ್ವಪ್ನವೆಂಬಂತೆ ತೋರಿತು; ನಿನ್ನೆ ಕೇಳಿದ ಗಾನವು ಮನಸ್ಸಿನಲ್ಲಿ ಪ್ರತಿಧ್ವನಿಯಾಗುತ್ತಿದೆಯೆಂದುಕೊಂಡೆನು. ಆಮೇಲೆ ಇಲ್ಲಿ ಇವರು ಯಾರೋ ಬಂದು ಹಾಡುತ್ತಿರುವುದು ತಿಳಿಯಿತು. ಆಹಾ! ಅದೇನು ಗಾನ! ಪರಮಾತ್ಮನು ಸೃಷ್ಟಿಯಲ್ಲಿ ಏನು ವಿಚಿತ್ರವಾದ ಸೌಂದರ್ಯವನ್ನು ಸೇರಿಸಿ ನೆಯ್ದಿದ್ದಾನೆ. ಎದ್ದು ನಿಂತು ನೋಡಿದೆನೆ ಇವರ ರೂಪು ಇವರ ಗಾನಕ್ಕೆ ಅನುಗುಣವಾಗಿದೆ. ಇದು ಪರಮಸ್ತ್ರೈಣ ಸೌಂದರ್ಯವೆನ್ನುವುದರಲ್ಲಿ ಸಂದೇಹವಿಲ್ಲ. ಇದನ್ನು ನೋಡದೆ ಭಾವಿಸುವುದು ಸಾಧ್ಯವಲ್ಲ. ಇವರು ಯಾರೋ? ಇವರ ಪರಿಯನ್ನು ಅರಿಯಬೇಕು. ಏನೋ ಮಾತನಾಡಿಕೊಳ್ಳುತ್ತಿದ್ದರು; ಗಾನ ಕೇಳಿದಂತೆ ಮಾತು ಕೇಳಬರಲಿಲ್ಲ. ಕೇಳೋಣವೆಂದರೆ ಓಡಿಹೋದರಲ್ಲಾ. ಋಷಿಕುಮಾರ ಋಷಿಪುತ್ರ ಎಂದು ಹೇಳುತ್ತಿದ್ದಂತಿತ್ತು. ಚಂಚಲಾ. ಆ ಬಾಲಕನ ಹೆಸರು ಚಂಚಲಾ. ಆಹಾ! ಎಂತಹ ಉಜ್ವಲವಾದ ಮಿಂಚಿನಂಥ ಸ್ವರೂಪ ಅದು! ಇವರು ಮನುಷ್ಯರಿರಲಾರರು.

(ಕಂದ)

ಸುಂದರಮಾದಾಕಾರದಿ
ಸುಂದರವಚರಾಗಿ ತೋರ್ಪರಿವರೆಮ್ಮವರೊಲ್
ಸಂದೇಹಮಿಲ್ಲ ದೇವ
ವೃಂದಮದೊಂದಿಲ್ಲಿ ಬಂದು ವಿಹರಿಸಿತಕ್ಕುಂ ‖

ಆಗಲಿ, ಹೋಗಿ ನೋಡುವ (ಎಂದು ಹೊರಡುವನು).

(ಪರದೆ ಬೀಳುವುದು)

# ಮೂರನೆಯ ಸ್ಥಾನ

ಋಷ್ಯಶೃಂಗನ ಆಶ್ರಮದ ವನ.

**ಸಮೀಪದಲ್ಲಿ ಆಶ್ರಮ ಕಾಣುತ್ತಿರುವುದು. ಹತ್ತಿರ ಪುಷ್ಕರಿಣಿ.**

**ಚಂಚಲೆ ಬರುವಳು.**

**ಚಂಚಲಾ.**—(ಸುತ್ತಲೂ ನೋಡಿ ಒಂದು ಕಡೆಗೆ ತಿರುಗಿ)

(ವೃತ್ತ)

ನೀಲಾಕಾಶದ ಶೋಭೆಯಂಬರವೆನಲ್ ಸಾಲಾದ ತಾರಾಗಣಂ
ಮಾಲಾಮೌಕ್ತಿಕರತ್ನದುತ್ಕರವೆನಲ್ ಸೌಂದರ್ಯದಿಂ ಲೋಕಕೇ
ಸೋಲಂ ನೀಡುವ ಧೀರಭಾವದೊಳು ಸಾರ್ದೀಯಾಮಿನೀಬಾಲೆಯಂ
ಡೋಲಾಯಂಗೊಳಿಸುತ್ತಲೈತರುತಿಹಂ ಸಾಂದ್ರಾಂಶು ತಾಂ
ಚಂದ್ರಮಂ||

ನಾವು ಬಂದ ಕೆಲಸ ಹೇಗೋ ಪರಿಣಮಿಸುವಂತೆ ತೋರುತ್ತಿದೆ. ಇವನಿಗೆ ನಮ್ಮ ಸ್ವರೂಪ ಇನ್ನೂ ತಿಳಿದಿಲ್ಲ. ಹತ್ತು ದಿನವಾದರೂ ಸ್ವಲ್ಪವಾದರೂ ಸಂದೇಹವನ್ನು ಕಾಣದ ಆ ಮನಸ್ಸು ಇನ್ನೆಷ್ಟು ತಿಳಿಯಾದದ್ದು! ಈ ನೈರ್ಮಲ್ಯವನ್ನು ಕಾನನವಾಸಿಗಳು ಸಾಮಾನ್ಯವಾಗಿ ಪಡೆಯುವರೇನೋ! ನಗರವಾಸಿಯಾದ ನನಗಂತೂ ಇದು ಆಶ್ಚರ್ಯವಾಗಿ ಕಾಣುತ್ತದೆ. ಇಂಥ ನಿರ್ಮಲವಾದ ಮನಸ್ಸಿನಿಂದ ಅವನು ನನ್ನನ್ನು ಒಬ್ಬ ಸ್ನೇಹಿತನೆಂದೂ ತನ್ನಂತೆಯೇ ಬಾಲಕನೆಂದೂ ಎಂದುಕೊಂಡಿರುವಾಗಲೆ ಹೇಳುವ ಮಾತುಗಳಿಂದ ನನ್ನ ದೇಹವು ರೋಮಾಂಚಿತವಾಗುತ್ತದೆ. ಶುಭ್ರಮಾನಸನಾದ ಅವನಿಗೆ ಇದರಿಂದ ಏನೂ ಆಗಲಿಲ್ಲ. ನಾನು ಹೊರಟುಹೋದರೆ ಆವಿಯಿಂದ ಅರೆಕ್ಷಣ ಮರೆದ ಕನ್ನಡಿಯ ಮುಖದಂತೆ ಅವನ ಸ್ವಭಾವವು ಎಂದಿನಂತೆ ಶುಭ್ರವಾಗಿ ತೊಳಗುವುದು. ನನ್ನ ಸ್ವಭಾವದಲ್ಲಿಯಾದರೋ ಇದೊಂದು ಕಲೆಯಾಗಿ ಹೋಯಿತು. ಈ ತಪ್ಪಿನ ಹೊರೆಯನ್ನು ನಾನು ಕಳೆದುಕೊಳ್ಳ

ವುದು ಹೇಗೆ? ಈ ಪ್ರೇಮದ ಪರಿಣಾಮವು ಸರಿಯಾಗುವಂತೆ ಮಾಡುವುದು ಹೇಗೆ? ಬಹಳ ಧೀರೆ, ನಾನು ಈ ಕಾರ್ಯವನ್ನು ನಡೆಯಿಸುವೆನೆಂದು ಕಳುಹಿಸಿಕೊಟ್ಟರೆ, ನಾನು ನನ್ನ ಮನಸ್ಸನ್ನು ಇಲ್ಲಿಯೇ ಬಿಟ್ಟುಹೋಗುತ್ತಿದೇನಲ್ಲ. ಇಲ್ಲವೆ ಬಿಟ್ಟುಹೋಗ ಲಾರದೆ ನಾನೂ ಇಲ್ಲೇ ನಿಲ್ಲುವಂತಿದೇನೆ. ಇದಕ್ಕೆ ಏನುಮಾಡು ವುದು......ಯಾರು?

**ಸುಂದರಿ.**—ಚಂಚಲಾ?

**ಚಂಚಲಾ.**—ಸುಂದರಾ ಏನು?

(ಸುಂದರಿ ಬರುವಳು)

**ಸುಂದರಿ.**—ಇದೇನು?

**ಚಂಚಲಾ.**—ನಾನೇನು ಹೇಳಲಿ?

**ಸುಂದರಿ.**—ನೀನು ಏನೂ ಹೇಳಬೇಕಾಗಿಲ್ಲ. ತಾನೇ ತಿಳಿಯುತ್ತದೆ.

**ಚಂಚಲಾ.**—ನಿಜ.

**ಸುಂದರಿ.**—ಧೀರೆಯಾದ ಆ ಚಂಚಲೆಯು ಏನಾದಳು?

**ಚಂಚಲಾ.**—ಚಂಚಲೆಯು ಧೀರೆ ಹೇಗೆ? ಎಂದೂ ಚಂಚಲೆಯೇ.

**ಸುಂದರಿ.**—ಅದು ನನಗೆ ತಿಳಿದಿರಲಿಲ್ಲ.

**ಚಂಚಲಾ.**—ನನಗೂ ತಿಳಿದಿರಲಿಲ್ಲ.

**ಸುಂದರಿ.**—ಅರಗುವರಿಯು ಮೊದಲು ನೋಡಿದ ಕಾಡುಮನುಷ್ಯನಿಗೆ ಹೀಗೆ ಮನವನ್ನು ತೆರುವುದೆ?

**ಚಂಚಲಾ.**—ಸುಂದರು ನೀನು ಕೋಪಿಸಬೇಡ. ಅವನು ಆಡುವ ಮಾತು ಗಳನ್ನು ಕೇಳಬೇಕು. ಅವನ ನೋಟವನ್ನು ನೋಡಬೇಕು. ಪ್ರೇಮದ ಭಾರದಿಂದ ಬಾಗುವ ಅವನ ಮನಸ್ಸು ಎಷ್ಟು ಸರಳ ವಾದುದೆಂಬುದನ್ನು ತಿಳಿಯಬೇಕು. ಆಗ್ಗೆ ನೀನು ಹೀಗೆ ಹೇಳಲಾರೆ.

**ಸುಂದರಿ.**—ಅದನ್ನು ನೋಡಿ ತಿಳಿದು ಆಗುವುದೇನು? ದೇಶದ ಕ್ಷಾಮವು ಹೋಯಿತೆ?

ಚಂಚಲಾ.––ನಾಳೆ ಹೋಗೋಣ ಸರಿಯೆ ?

ಸುಂದರಿ.––ಈ ದಿನ ನೀನು ಹೊರಟುಹೋಗುವುದೆಂದೂ ಅವನು ನಿನ್ನನ್ನು ನೋಡಬೇಕೆಂದಾಗ ನಾನು ಆ ಸಮಾಚಾರವನ್ನು ತಿಳಿಸಿ ಅವನನ್ನು ಬರುವಂತೆ ಮಾಡುವುದೆಂದೂ ನಿನ್ನೆ ಹೇಳಿದೆ. ಆಗಲಿ ಎಂದದ್ದಾಯಿತು. ಹೊರಡುವ ಹೊತ್ತಿಗೆ ಸರಿಯಾಗಿ ಇಲ್ಲಿ ಬಂದು ನಿಂತಿದ್ದೀಯೆ. ಒಂದೊಂದು ಸಲವೂ ಹೀಗೆಯೇ ಆಗುವುದು.

ಚಂಚಲಾ.––ಒಂದು ಸಲ ಹೀಗಾಯಿತು. ಸ್ವಲ್ಪ ತಡೆ. ಈ ಒಂದು ದಿನ ಅವನನ್ನು ಈ ಬೆಳದಿಂಗಳ ರಾತ್ರಿಯಲ್ಲಿ ಒಂದು ಸಲ ನೋಡಿ ಅವನ ಆ ಮಾತುಗಳನ್ನು ಕೇಳಿ ಆ ಆನಂದವನ್ನು ಇನ್ನೊಂದು ಸಲ ತಿಳಿದು ಬಂದುಬಿಡುವೆನು. ಆಮೇಲೆ ಹೇಗಾದರೂ ಆಗಲಿ.

ಸುಂದರಿ.––ಇದಕ್ಕಾಗಿಯೇ ಆ ಪ್ರಯಾಣವನ್ನು ಬಿಟ್ಟು ಇಲ್ಲಿಗೆ ಬಂದೆಯಾ ?

ಚಂಚಲಾ.––ಇಲ್ಲ ನೋಡು. ನಾನು ಹೊರಟು ಹೋದಮೇಲೆ ಅವನು 'ಹೋದರೆ ಹೋಗಲಿ' ಎಂದು ಬಾರದೆ ನಿಂತುಬಿಟ್ಟರೆ ನಮ್ಮ ಪ್ರಯತ್ನವೆಲ್ಲ ವ್ಯರ್ಥವಾಗುವುದಲ್ಲ; ನಾನೇ ಬಂದು ಕೊನೆಗೂ ಬರುವನೋ ಇಲ್ಲವೋ ಎಂಬುದನ್ನು ನೋಡಿ ಹೋಗೋಣ ಎಂದು ಬಂದೆ. ನಾನು ಹೊರಟುಹೋದಮೇಲೆ ತಂದೆಯ ಮಾತನ್ನು ಮೀರಲಾರದೆ ಇವನು ಇಲ್ಲಿಯೇ ನಿಂತುಬಿಟ್ಟರೆ ಈ ಕಾರ್ಯವೆಲ್ಲ ಕೆಟ್ಟುಹೋಗುವುದು.

ಸುಂದರಿ.––ನೀನು ಹೇಳುವುದು ಸರಿಯೆ. ಆದರೆ ನೀನು ಇದಕ್ಕಾಗಿ ಇಲ್ಲಿ ನಿಲ್ಲಲಿಲ್ಲ.

ಚಂಚಲಾ.––ಅದನ್ನು ನಾನೇ ಹೇಳಲಾರೆ.

ಸುಂದರಿ.––ನೀನು ಕರೆದೂ ಅವನು ಬಾರದೆ ನಿಂತರೆ ?

ಚಂಚಲಾ.––ಹೇಗೂ ಇಲ್ಲ. ಹೊರಟುಹೋಗುವುದು.

ಸುಂದರಿ.––ಹೇಗೂ ಇಲ್ಲ, ರಾಜ್ಯಕ್ಕೆ ಕ್ಷಾಮ ಹೋಗದೆ ಇದ್ದರೂ ನಾವಾದರೂ ಇಲ್ಲಿ ಸುಖವಾಗಿರೋಣ, ಎನ್ನಬಹುದಲ್ಲ.

ಚಂಚಲಾ.—ಹಾಗೆನ್ನುವುದಕ್ಕಿಲ್ಲ.

ಸುಂದರಿ.—ಏಕೆ ?

ಚಂಚಲಾ.—ನಮ್ಮ ಕೆಲಸವಂತೂ ಆಗಲಿಲ್ಲ. ಆತನಾದರೂ ಚಿರಜೀವಿಯಾಗಲಿ.

ಸುಂದರಿ.—ಇನ್ನೂ ಆ ಗಡು ಕಳೆಯಲಿಲ್ಲವೊ ?

ಚಂಚಲಾ.—ಇನ್ನೂ ಅವನಿಗೆ ಆ ವಯಸ್ಸು ಮೀರಿಲ್ಲ.

ಸುಂದರಿ.—ಹೊರಟುಹೋದರೆ ನಿನ್ನ ಪಾಡೇನು ?

ಚಂಚಲಾ.—ಸಂನ್ಯಾಸ ತೆಗೆದುಕೊಳ್ಳುವುದು.

ಸುಂದರಿ.—ಗಡು ಮುಗಿದಮೇಲೆ ಇಲ್ಲಿಗೆ ಬರಬಹುದಲ್ಲ?

ಚಂಚಲಾ.—ಸುಂದರು, ನಾನು ಇಂದು ಅವನನ್ನು ಬಿಟ್ಟುಹೋದರೆ ಆ ಮೇಲೆ ಈ ಜೀವ ನಿಲ್ಲಲಾರದು. ಬಾರದೆ ನಿಲ್ಲುವನೋ ಎಂದು ಜೀವ ಈಗಲೇ ತುಡಿಯುತ್ತಿದೆ.

ಸುಂದರಿ.—ನೀನು ಸಂನ್ಯಾಸದ ಮಾತನ್ನು ಎತ್ತಬೇಡ. ಸಂನ್ಯಾಸ ತೆಗೆದುಕೊಳ್ಳುವ ಮುಖವೇ ಇದು. ಅದಕ್ಕೆ ಬದಲಾಗಿ ನಾನಾದರೂ ನಿನ್ನನ್ನು ಮದುವೆಯಾಗುವೆನು.

ಚಂಚಲಾ.—ಈ ದಿನ ನಮ್ಮ ಯತ್ನವು ವಿಫಲವಾದರೆ ಆ ಮದುವೆಯು ಅದಕ್ಕೆ ತಕ್ಕ ಹಾಗಿರುವುದು. **(ಎಂದು ಒಂದು ಕಡೆಗೆ ನೋಡಿ)** ಅಗೋ ಅವನು ಬಂದಹಾಗಿದೆ.

ಸುಂದರಿ.—ನಾನು ಹೋಗುತ್ತೇನೆ. ನಿನ್ನ ಮನಸ್ಸು ಸ್ಥಿರವಾಗಿಲ್ಲ. ಜೋಕೆ ! **(ಎಂದು ಹೋಗುವಳು.)**

ಚಂಚಲಾ.—ದೇವದೇವ, ಸರ್ವನಿಯಾಮಕ. ನನ್ನ ಜನ್ಮವನ್ನು ಸಾರ್ಥಕಗೊಳಿಸು.

(ಕಂದ)

ಅರಿಯದೆ ನಾನೀಕಾರ್ಯಕೆ
ಕರಮಂನೀಡಿದೆನು ವೀರನಿಂದಾಗದ ಸಂ
ಗರದೊಳ್ಕೊಡಗಿದ ಭೀರುವೊ
ಲರಿಯುದವರನೆರವೆ ಶ್ರೀಶ ಪಾಲಿಪುದೆನ್ನಂ ॥

ಇವನನ್ನು ಕರೆದುಕೊಂಡುಹೋಗುವುದಕ್ಕೆ ಏನಾಗಬೇಕೋ ಅದನ್ನೆಲ್ಲಾ ನೀನು ನಡೆಯಿಸಬೇಕು, ದೇವದೇವ, ಕರುಣಾಕರ.

**ಋಷ್ಯಶೃಂಗ.**—(ತೆರೆಯಿಂದ) ಚಂಚಲಕುಮಾರ (ಎಂದು ಕೂಗಿ ಪ್ರವೇಶಿಸುವನು).

**ಚಂಚಲಾ.**—ಋಷಿಕುಮಾರ.

**ಋಷ್ಯಶೃಂಗ.**—ಬಹಳ ಹೊತ್ತು ಕಾದೆಯ ?

**ಚಂಚಲಾ.**—ಇಗೋ ಸ್ವಲ್ಪ ಹೊತ್ತು. ಅಲ್ಲದೆ ಸಂಜೆಯು ಚೆನ್ನಾಗಿರುವುದರಿಂದ ಹೊತ್ತು ತಿಳಿಯುವುದಿಲ್ಲ.

**ಋಷ್ಯಶೃಂಗ.**—ಇರಬೇಕು. ಆದರೆ ನಾನು ನಿನಗಾಗಿ ಕಾಯುವಾಗ ನನಗೆ ಒಂದೊಂದು ನಿಮಿಷವು ಒಂದೊಂದು ದಿನವಾಗುವುದು ; ಸಂಜೆಯು ಎಷ್ಟು ಚೆನ್ನಾಗಿದ್ದರೂ ಚೆನ್ನಾಗಿ ಕಾಣುವುದಿಲ್ಲ.

**ಚಂಚಲಾ.**—ನಿನ್ನ ಸ್ನೇಹ ಅಷ್ಟು ಅಧಿಕವಾದುದು.

**ಋಷ್ಯಶೃಂಗ.**—ಈಗ ಇಲ್ಲಿಗೆ ಬರುವುದಕ್ಕೆ ಸಿದ್ಧವಾದಾಗ ಆ ಗೊರವನು ಸುರಭಿಯನ್ನು ತಂದುಬಿಟ್ಟು ನಮ್ಮ ನಂದಿನಿಯನ್ನು ಕರೆದುಕೊಂಡು ಹೋದನು. ಅವನು ಎಷ್ಟುಹೊತ್ತಿಗೆ ಹೋದಾನೋ ಎನ್ನಿಸಿತು. ಅವನು ಹೊರಟುಹೋದ ಒಡನೆಯೇ ನಾನು ಇಲ್ಲಿಗೆ ಬಂದೆ.

**ಚಂಚಲಾ.**—ಗೊರವನು ಯಾರು ?

**ಋಷ್ಯಶೃಂಗ.**—ಅವನು ಈ ಕಾಡಿನಲ್ಲಿ ಎಲ್ಲೋ ಇದ್ದಾನೆ. ಆಗಾಗ ಹಾಲಿಗಾಗಿ ಒಂದು ಹಸುವನ್ನು ತಂದುಬಿಟ್ಟು ಇಲ್ಲಿರುವ ಹಸುವನ್ನು ತೆಗೆದುಕೊಂಡು ಹೋಗುತ್ತಾನೆ.

**ಚಂಚಲಾ.**—ಅವನ ವಿಷಯ ಇನ್ನೇನೂ ತಿಳಿಯದು ನಿನಗೆ?

**ಋಷ್ಯಶೃಂಗ.**—ಇಲ್ಲ.

**ಚಂಚಲಾ.**—ಇಲ್ಲಿಗೆ ಇನ್ನು ಯಾರೂ ಬರುವುದೇ ಇಲ್ಲವೆ?

**ಋಷ್ಯಶೃಂಗ.**—ಯಾರೂ ಸುಳಿಯುವುದಿಲ್ಲ. ಹರಿದಾರಿಯ ವನದಲ್ಲಿ ನಾವು ಇರುವಷ್ಟು ಸ್ಥಳಕ್ಕೂ ಯಾರೂ ಬರಕೂಡದೆಂದು ತಂದೆಯವರು ನಿರೂಪಿಸಿದ್ದಾರೆ. ಅವರದು ಸ್ವಲ್ಪ ಕೋಪದ ಪ್ರಕೃತಿಯಾದದ್ದರಿಂದ ಯಾರೂ ಅಡ್ಡಾಡುವುದಿಲ್ಲ. ಅದರಿಂದಲೇ ನೀನು ಬಂದಾಗ ನನಗೆ ಅಷ್ಟು ಸಂತೋಷ. ನಾನು ಜತೆಗಾರರನ್ನು ಕಂಡವನೇ ಅಲ್ಲ. ನನಗೆ ನೀನು ಎಂತಹ ಜತೆಗಾರನು ಸಿಕ್ಕದೆ.

**ಚಂಚಲಾ.**—ಅದು ನಿನ್ನ ಸ್ನೇಹದ ಆಧಿಕ್ಯ.

**ಋಷ್ಯಶೃಂಗ.**—ಇದು ನಮ್ಮ ತಂದೆಯವರು ಹೇಳಿದಂತಾಯಿತು. ನನ್ನ ಸ್ನೇಹವು ಎಷ್ಟು ಅಧಿಕವಾಗಿದ್ದರೂ ಇಲ್ಲವಾದರೂ ನೀನು ಒಬ್ಬನು ಇಲ್ಲಿ ಇದ್ದರಲ್ಲವೆ ಸ್ನೇಹವು ಅಧಿಕವಾಗುವುದು. ನಿನ್ನ ರೂಪೂ ನಿನ್ನ ಗುಣವೂ ನಿನ್ನ ಸ್ನೇಹವೂ ನನ್ನಲ್ಲಿ ಈ ಸ್ನೇಹ ವನ್ನುಂಟುಮಾಡಿವೆ.

**ಚಂಚಲಾ.**—ನಾನು ಧನ್ಯನು.

**ಋಷ್ಯಶೃಂಗ.**—ಚಂಚಲಕುಮಾರ ನಿನ್ನ ಬಳಿ ಇರುವುದರಿಂದ ನನಗೆ ಎಷ್ಟು ಸುಖವುಂಟೋ ನನ್ನ ಬಳಿ ಇರುವುದರಿಂದ ನಿನಗೂ ಅಷ್ಟು ಸಂತೋಷವುಂಟೆ?

**ಚಂಚಲಾ.**—ಸಂದೇಹವೇನು?

**ಋಷ್ಯಶೃಂಗ.**—ಮತ್ತೆಯೇಕೆ ಏನನ್ನೋ ಕುರಿತು ಯೋಚಿಸುತ್ತಿರುವಂತಿದೆ?

**ಚಂಚಲಾ.**—ಮನಸ್ಸು ಎಲ್ಲೋ ಸ್ವಲ್ಪ ಅಲೆಯುವುದಕ್ಕೆ ಹೋಗಿತ್ತು.

**ಋಷ್ಯಶೃಂಗ.**—ಎಲ್ಲಿಗೆ ಹೋಗಿತ್ತು?

**ಚಂಚಲಾ.**—ಊರಿನ ಕಡೆಗೆ.

**ಋಷ್ಯಶೃಂಗ.**—ನೀನು ಹತ್ತಿರ ಇರುವಾಗ ನನ್ನ ಮನಸ್ಸು ಎಲ್ಲಿಗೂ ಹೋಗುವುದಿಲ್ಲ. ಊರಿನ ಮಾತೇನು ?

**ಚಂಚಲಾ.**—ಬಂದು ಹದಿನೈದು ದಿನವಾಗುತ್ತಾ ಬಂತು. ಆದುದರಿಂದ ಆ ಕಡೆ ಮನಸ್ಸು ಹೋಯಿತು.

**ಋಷ್ಯಶೃಂಗ.**—ಹದಿನೈದು ದಿನವೆ ? ಇಲ್ಲ.

**ಚಂಚಲಾ.**—ಇಲ್ಲಿಗೆ ಬಂದು ಹತ್ತುದಿನವಾಯಿತು.

**ಋಷ್ಯಶೃಂಗ.**—ಹತ್ತು ದಿನವಾಯಿತೆ ? ನನಗೆ ತಿಳಿಯುಲೇ ಇಲ್ಲ. ನಿನ್ನ ಸ್ನೇಹದ ಮಹಿಮೆಯನ್ನು ಏನೆನ್ನಲಿ ?

(ವೃತ್ತ)

ಒಲವಿಂ ತೀವಿದ ನೋಟದಿಂ ಸಲವಸಂಸ್ಪರ್ಶಂಗಳೊಳ್ ತೋರುವೀ
ತಳಿರೊಂದಂದದ ಕೋಮಲಾಂಗುಳಿಯುಸೋಂಕಿಂ ಹಾಸಸಮ್ಮೋದಗಳ್
ವಿಲಸದ್ರೂಪವತಾಳ್ದವೊಲ್ನೆರೆದ ಸಲ್ಲಾಪಂಗಳಿಂ ಸಂದ ಚಂ
ಚಲ ನಿನ್ನೀ ಕೆಳೆಯುಂದಲೀ ಕೆಲದಿಸಂ ತೀಲ್ದೋದುದಾನಂದದೊಳ್ ||.

**ಚಂಚಲಾ.**—ಅಯ್ಯಾ ನನಗೂ ಹತ್ತು ದಿನ ಬಹಳ ಆನಂದದಲ್ಲಿ ಕಳೆಯಿತ್ತು. ನಾನು ಇಂತಹ ಸುಖವನ್ನು ಇದುವರೆಗೆ ಅನುಭವಿಸಲಿಲ್ಲ. ಇನ್ನು ಮತ್ತೆ ಅನುಭವಿಸುವ ಪುಣ್ಯವಿರಲಾರದು.

**ಋಷ್ಯಶೃಂಗ.**—ಅದೇಕೆ ಹಾಗೆನ್ನುವೆ ? ನೀನು ಇಲ್ಲಿ ಇರುವುದಕ್ಕೆ ಅಡ್ಡಿ ಇಲ್ಲ. ತಂದೆಯವರು ಬರಲಿ. ಅವರಿಗೆ ನಾನು ಸಮಾಧಾನ ಹೇಳುವೆನು. ನೀನು ಇಲ್ಲಿಯೇ ಇರುವುದಕ್ಕೆ ಅವರು ಒಪ್ಪುವಂತೆ ಮಾಡುವೆನು.

**ಚಂಚಲಾ.**—ಅಯ್ಯಾ ನಾನು ಇಲ್ಲಿ ಇರುವುದಕ್ಕಿಲ್ಲ. ನಿಮ್ಮ ತಂದೆಯು ನಿನ್ನನ್ನು ಕಾಣುವಂತೆ ನಮ್ಮ ತಂದೆಯೂ ನನ್ನನ್ನು ಪ್ರೀತಿಯಿಂದ ಕಾಣುವನು. ನಾನು ಅವನ ಬಳಿಗೆ ಹೋಗಬೇಕು.

**ಋಷ್ಯಶೃಂಗ.**—ಹೋಗುವೆಯಂತೆ. ಅದು ಹಾಗಿರಲಿ. ನೀನು ಎಂದಿನಂತೆ ಉಲ್ಲಾಸದಿಂದ ಮಾತನಾಡು. ಇಂದು ಸಂಜೆ ಬಹಳ ಚೆನ್ನಾಗಿತ್ತು.

ಈ ಹುಣ್ಣಿಮೆಯ ಚಂದ್ರನಂತೂ ಕೈಗೆ ಸಿಕ್ಕುವಂತೆ ಆಕಾಶವನ್ನು ತುಂಬಿದಾನೆ.

**ಚಂಚಲಾ.**—ಹೌದು. ವನವು ಈ ಬೆಳದಿಂಗಳ ಸಮುದ್ರದಲ್ಲಿ ಮುಳುಗಿದಂತೆ ಕಾಣುತ್ತದೆ.

**ಋಷ್ಯಶೃಂಗ.**—ಮುಳುಗಿದಂತೆ ! (**ಎಂದು ಉತ್ಸಾಹದಿಂದ**) ನಾನೂ ನೀನೂ ಈ ಬೆಳದಿಂಗಳ ಸಮುದ್ರದಲ್ಲ ಜತೆಯಾಗಿ ಮುಳುಗಿರುವಂತೆ! ಹೌದು, ಬಹಳ ಆನಂದಮಯವಾಗಿದೆ. ಚಂಚಲ, ನನಗೆ ಏನೆಂದು ತೋರುತ್ತದೆ ಹೇಳಲೆ ?

**ಚಂಚಲಾ.**—ಹೇಳು.

**ಋಷ್ಯಶೃಂಗ.**—ನಾನೂ ನೀನೂ ಹೀಗೆ ಇಂತಹ ಬೆಳದಿಂಗಳಲ್ಲಿ ಮುಳುಗಿ ಒಂದು ಕಡೆ ಮೊದಲು ಯಾವಾಗಲೋ ಇದ್ದಂತೆಯೂ ಅಂದು ಜತೆಯಾಗಿದ್ದ ಹಾಗೆ ಇಂದು ಮತ್ತೆ ಇರುವಂತೆಯೂ ತೋರುತ್ತದೆ.

**ಚಂಚಲಾ.**—ಮನುಷ್ಯನಿಗೆ ಹಾಗೆ ಒಂದೊಂದು ಸಲ ತೋರುವುದು.

**ಋಷ್ಯಶೃಂಗ.**—ಅದು ಹಾಗೆಯೇ ಇರಬಹುದು. ಪರಮಾತ್ಮನಲ್ಲಿ ಇದೆಲ್ಲಾ ನಡೆದಿರತಕ್ಕದ್ದೇ. ಅವನಲ್ಲಿ ಭೂತಭವಿಷ್ಯತ್ತುಗಳು ಬೇರೆಯಾದುವಲ್ಲ. ಅಯ್ಯೋ ಇಲ್ಲವೆ ನಿಜವಾಗಿಯೂ ಹೀಗಿರುವುದೋ, ಇಲ್ಲವೆ ನೀನು ನನ್ನ ಜತೆಯಲ್ಲಿರುವುದರಿಂದ ನನಗೆ ಹೀಗೆ ತೋರುತ್ತಿದೆಯೋ, ನಾನು ಇಷ್ಟು ಸುಂದರವಾದ ರಾತ್ರಿಯನ್ನು ಈವರೆಗೆ ನೋಡಿರಲಿಲ್ಲ.

**ಚಂಚಲಾ.**—ಪ್ರಿಯವಾದ ವಸ್ತು ಹತ್ತಿರ ಇದ್ದರೆ ಸುಂದರವಾದ ವಸ್ತು ಮತ್ತಷ್ಟು ಸುಂದರವಾಗಿ ಕಾಣುವುದು ಸಹಜ.

**ಋಷ್ಯಶೃಂಗ.**—ಈವರೆಗೆ ಇಂತಹ ಬೆಳದಿಂಗಳ ರಾತ್ರಿಯು ಬಂದರೆ ನನ್ನ ಮನಸ್ಸಿಗೆ ಯಾವುದೋ ಒಂದು ಕೊರೆಯು ಕಾಣುತ್ತಿತ್ತು. ತೃಪ್ತಿಯುಂಟಾಗುತ್ತಿರಲಿಲ್ಲ. ಒಂದೊಂದು ಸಲ ದೂರಕ್ಕೂ ಹರಿಯುವ ಈ ತಿಂಗಳ ಪ್ರವಾಹವು ದಿಗಂತದಲ್ಲಿ ಕಣ್ಣಿಗೆ ಶುಭ್ರವಸ್ತ್ರಧಾರಿಯಾದ ಯಾರೋ ಒಬ್ಬ ಬಾಲಕನು ದೂರದಿಂದ ಬಾರೆಂದು ಕರೆಯುತ್ತಿರುವನೆಂಬಂತೆ ತೋರುತ್ತಿತ್ತು. ವನದಲ್ಲಿ ಸುಂದರ

ಗಳಾದ ಪ್ರದೇಶಗಳಲ್ಲೆಲ್ಲ, ಹೂವಿನಿಂದ ಮೆರೆಯುವ ಗಿಡಗಳಲ್ಲಿ, ಕೋಮಲವಾದ ತಳಿರನ್ನು ಬಿಟ್ಟ ಲತೆಗಳಲ್ಲಿ, ಕಲಕಲ ಶಬ್ದ ಮಾಡುತ್ತ ಸಣ್ಣ ಪಾತ್ರದಲ್ಲಿ ಸುಳಿಯುತ್ತಿರುವ ತಿಳಿನೀರಿನಲ್ಲಿ, ಎಲ್ಲದರಲ್ಲೂ ಯಾವುದೋ ಒಂದು ಆಕಾರವು ಇರುತ್ತಾ ವಿಶಾಲ ವಾದ ದಯಾಪರಿಪೂರಿತವಾದ ಕಣ್ಣುಗಳಿಂದ ನನ್ನನ್ನು ನೋಡು ವಂತೆಯೂ, ಮೃದುವಾದ ನಗೆಯಿಂದ ಬಾರೆಂದು ಹೇಳು ವಂತೆಯೂ ಮನಸ್ಸಿಗೆ ಒಮ್ಮೊಮ್ಮೆ ತೋರುತ್ತಿತ್ತು. ನಿನ್ನೊಂದಿಗೆ ಸ್ನೇಹವು ಬೆಳೆದಮೇಲೆ ಆ ಆಕಾರವೇ ನೀನೆಂಬಂತೆ ತೋರುತ್ತಿದೆ. ಈಗ ಆ ಅತೃಪ್ತಿಯೂ ಇಲ್ಲ. ನೀನು ಬಹಳ ಸುಂದರನು ಚಂಚಲ. ನಿನ್ನಿಂದ ಈ ನನ್ನ ಜೀವನವು ಸಂಪೂರ್ಣತೆಯನ್ನು ಹೊಂದಿತು.

**ಚಂಚಲಾ.**—ಅಯ್ಯಾ ಜೀವನವು ಸಂಪೂರ್ಣತೆಯನ್ನು ಹೊಂದಿತೆಂದು ನಾವು ಹೇಳಬಲ್ಲೆವೆ? ಆದರೆ ನೋಡುತ್ತಿದ್ದಹಾಗೆ ಈ ಸೃಷ್ಟಿಯ ಸೌಂದರ್ಯವು ಬರಬರುತ್ತಾ ಸ್ಪಷ್ಟವಾಗಿ ಕಾಣುವುದು ನಿನ್ನಂತಹ ಋಷಿಕುಮಾರರಿಗೆ ಕಷ್ಟವಲ್ಲ.

**ಋಷ್ಯಶೃಂಗ.**—ನೀನು ಬಂದದ್ದರಿಂದ ಅದು ಸುಲಭವಾಯಿತು. ಇಲ್ಲ ದಿದ್ದರೆ ಇಂತಹ ಎಷ್ಟು ಸುಂದರವಾದ ರಾತ್ರಿಗಳು ಬಂದರೂ ಅತೃಪ್ತಿಯ ಯಾತನೆಯಿಂದ ನುಯ್ಯುತ್ತಾ ಕಳೆದು ಹೋಗು ತಲಿದ್ದವು. ನೀನು ನನ್ನ ಜೀವನದಲ್ಲಿ ಎಷ್ಟು ಕಷ್ಟಸಾಧ್ಯವಾಗಿದ್ದ ಫಲವನ್ನು ತಂದಿರುವೆ ಎನ್ನುವುದನ್ನು ನಾನು ಹೇಳಲಾರೆ.

**ಚಂಚಲಾ.**—ಅಯ್ಯಾ ನೀನು ಹೇಳುವಮಾತು ನನಗೆ ಅರ್ಥ ತಿಳಿಯುತ್ತದೆ. ಅರ್ಥ ತಿಳಿಯುವುದಿಲ್ಲ. ಕಷ್ಟಸಾಧ್ಯವಾಗಿದ್ದುದು ಏನು? ನಾನು ಏನನ್ನು ತಂದೆನು?

**ಋಷ್ಯಶೃಂಗ.**—ನಾನು ಮೊದಲೇ ಹೇಳಿದೇನೆಯಲ್ಲ. ಈಗ ನಿನ್ನನ್ನು ನೋಡಿದರೆ ನಿನ್ನ ಬಣ್ಣ ಹಾಲಕೆನೆಯಲ್ಲಿ ಬೆಳದಿಂಗಳನ್ನು ನೊರೆ ತೇಯ್ದು ಹಚ್ಚಿದಹಾಗೆ ಇದೆ. ಇದನ್ನು ನೋಡದೆ ಇರುವವರು ಇದು ಹಾಗಿರಬಹುದೆಂದು ನೆನೆಯಲು ಸಾಧ್ಯವೆ?

**ಚಂಚಲಾ.**—ಇನ್ನೇನು?

**ಋಷ್ಯಶೃಂಗ.**—ನಿನ್ನ ತುಟಿಯು ನಮ್ಮ ಕುಟೀರದ ಹಿಂಗಡೆಯು ತೊಂಡೆಯ ಗಿಡದಲ್ಲಿ ಬಿಡುವ ಹಣ್ಣಿನ ಬಣ್ಣವಾಗಿದೆ.

**ಚಂಚಲಾ.**—ಉಂ.

**ಋಷ್ಯಶೃಂಗ.**—ನಿನ್ನ ಬಳಿ ಬಂದರೆ ಹೂಬಿಟ್ಟ ಮಲ್ಲಿಗೆಯ ಬಳ್ಳಿಯ ಬಳಿ ನಿಂತಂತೆ ಆನಂದವಾಗುತ್ತದೆ.

**ಚಂಚಲಾ.**—ಆಯಿತು.

**ಋಷ್ಯಶೃಂಗ.**—ನಿನ್ನ ಕಣ್ಣಿನ ಮಾದರಿಯನ್ನೇ ಹೇಳಲಾರೆ. ನೀನು ನನ್ನನ್ನು ನೋಡಿದರೆ ನೀಳವಾದ ಎರಡು ಮಿಂಚಿನ ನಳಿದೋಳು ಗಳು ನನ್ನನ್ನು ಹಿಡಿದಂತೆ ತೋರುವುದು.

**ಚಂಚಲಾ.**—ಉಂ (ಎಂದು ಸ್ವಲ್ಪ ನಗುವನ್ನು ಸೂಚಿಸುವಳು).

**ಋಷ್ಯಶೃಂಗ.**—ನೀನು ಸ್ವಲ್ಪ ನಕ್ಕರೆ ಹಲ್ಲು ಈ ನೀರಿನಲ್ಲಿ ನಕ್ಷತ್ರದಂತೆ ಕಾಣುವುದು; ಮುಖವೆಲ್ಲ ನಗುವುದು; ಕಣ್ಣು ನಗುವಿನ ಒಂದು ಕಾಂತಿಯಿಂದ ತುಂಬಿ ತೂಗುವುದು; ನನ್ನ ಮನಸ್ಸು ಅಲ್ಲೋಲಕಲ್ಲೋಲವಾಗುವುದು.

**ಚಂಚಲಾ.**—ಹಾಗಾದರೆ ನಾನು ನಗುವುದಿಲ್ಲ.

**ಋಷ್ಯಶೃಂಗ.**—ನೀನು ನಗದೆ ಇದ್ದರೂ ಚೆನ್ನಾಗಿಯೇ ಇರುತ್ತದೆ. ಅಲ್ಲೋಲಕಲ್ಲೋಲವಾಗುವುದೆಂದರೆ ಏನು? ಮನಸ್ಸಿನಲ್ಲಿ ಹೇಗೋ ಆಗುತ್ತದೆ. ಆದರೆ ಬಹಳ ಸುಖವುಂಟಾಗುತ್ತದೆ. ಅದು ನಿನ್ನ ನಗೆಯಲ್ಲಿ ವಿಶೇಷ.

**ಚಂಚಲಾ.**—ಅಯ್ಯಾ ನಮ್ಮಲ್ಲಿ ಈ ವಿಧವಾದ ವರ್ಣನೆಯನ್ನು ಬಾಲಕರು ತಮ್ಮಂತೆ ಬಾಲಕರಿಗೆ ಹೇಳುವುದಿಲ್ಲ. ತಮ್ಮ ಪ್ರಿಯೆಯರಾದ ಸ್ತ್ರೀಯರಿಗೆ ಹೇಳುತ್ತಾರೆ. (**ತಾನೇ**) ಅಯ್ಯೋ, ನಾನು ಏನು ಹೇಳಿದೆನು?

**ಋಷ್ಯಶೃಂಗ.**—ಸ್ತ್ರೀಯರು ಯಾರು? ನಮ್ಮಂತಹ ಜನರೊ?

**ಚಂಚಲಾ.**—(ತಾನೇ) ಆಯಿತು. ಇದೂ ಒಳ್ಳೆಯದೇ. ಹೇಳಿ ಹೇಗಾದರೂ ಕರೆದುಕೊಂಡು ಹೋಗೋಣ. (ಅವನಿಗೆ) ಹೌದು. ಏಕೆ ನೀನು ಕೇಳಿಯೇ ಇಲ್ಲವೆ?

**ಋಷ್ಯಶೃಂಗ.**—ಇಲ್ಲ.

**ಚಂಚಲಾ.**—ನಿಮ್ಮ ತಾಯಿಯ ಮಾತನ್ನು ಕೇಳಿಲ್ಲವೆ?

**ಋಷ್ಯಶೃಂಗ.**—ನಮ್ಮ ತಂದೆಯವರು ನಮ್ಮ ತಾಯಿಯ ಮಾತನ್ನು ಒಂದು ಸಲ ಮಾತ್ರ ಎತ್ತಿದರು. ಇದು ಬಹಳ ವರ್ಷದ ಸಂಗತಿ. ಆಮೇಲೆ ಆ ಮಾತನ್ನು ಯಾರ ಸಂಗಡಲೂ ಆಡಕೂಡದೆಂದು ಅವರು ನಿಯಮಿಸಿದರು. ನಾನು ಇಂದೇ ಆ ಮಾತನ್ನು ಮತ್ತೆ ನಿನ್ನೊಂದಿಗೇ ಆಡುತ್ತಿರುವುದು. ತಾಯಿ ಎಂದರೆ ಏನು?

**ಚಂಚಲಾ.**—(ತಾನೇ) ಚಿರಜೀವಿಯಾಗಿರುವುದಕ್ಕೆ ಹದಿನೆಂಟು ವರುಷ ಕಳೆಯುವವರೆಗೂ ತಾಯಿ ಏನ್ನುವುದು ತಿಳಿಯದೆ ಇರಬೇಕಾದರೆ ಈ ಚಿರಜೀವಿತ್ವವೇಕೆ? (ಅವನಿಗೆ) ನಿಮ್ಮ ತಂದೆಯವರು ತಾಯಿ ಎಂದರೆ ಏನು ಎಂದು ಹೇಳಿದರು?

**ಋಷ್ಯಶೃಂಗ.**—ತನ್ನಂತೆಯೇ ಇನ್ನೊಂದು ವ್ಯಕ್ತಿಯೆಂದೂ ತನ್ನಂತೆ ನನ್ನನ್ನು ಪ್ರೀತಿಯಿಂದ ಕಾಣುತ್ತಿದ್ದಿತೆಂದೂ ಹೇಳಿದರು.

**ಚಂಚಲಾ.**—ಅದಕ್ಕೆ ನೀನೇನೆಂದುಕೊಂಡೆ?

**ಋಷ್ಯಶೃಂಗ.**—ಮೊದಲು ಅದನ್ನು ನೋಡದೆ ಹೋದೆನೆ ಎನ್ನಿಸಿತು. ಆಮೇಲೆ ಇಬ್ಬರು ತಂದೆಯವರೇಕೆ ಎಂದುಕೊಂಡೆ. ವನದಲ್ಲಿ ಆಗಾಗ ನೋಡುತ್ತಿದ್ದಹಾಗೆ ಕಂಡಿತು ಎಂದೆನಲ್ಲಾ; ಅದು ಒಂದೊಂದು ಸಲ ನನ್ನ ತಾಯಿಯೋ ಎಂದು ಎಣಿಸಿಕೊಂಡಿದೇನೆ.

**ಚಂಚಲಾ.**—ಆಹಾ! ಅದು ನಿಜವಾದ ಮಾತು. ಪರಮಾತ್ಮನು ಕರುಣೆಯಿಂದ ನೋಡುವ ಸ್ಥಳದಲ್ಲೆಲ್ಲ ತಾಯಿ ಇರುವಳು.

(ಕಂದ)

ಸಿರಿಯುರಸನ ಬೇರೆ ಗುಣಂ
ಧರಿಸುವುದೆಂತಖಿಲ ರೂಪಗಳನೀ ಜಗದೊಳ್
ಧರಿಸುವುದಂತೆಯೆ ಆತನ
ಕರುಣಾರಸವೆಮ್ಮ ಪೊರೆಯೆ ತಾಯಾಕೃತಿಯಂ ॥

**ಋಷ್ಯಶೃಂಗ.**—ನನಗೆ ಇದು ತಿಳಿಯದು. ಆದರೆ ಈಗ ತಾಯಿಯ ಮಾತೇನು ?

**ಚಂಚಲಾ.**—ಇಂಥ ತಾಯಿಯು ಸ್ತ್ರೀ.

**ಋಷ್ಯಶೃಂಗ.**—ಹಾಗಾದರೆ ಸ್ತ್ರೀಯರು ಬಹಳ ಉತ್ತಮರಾದವರಾಗಿರಬೇಕು.

**ಚಂಚಲಾ.**—ಬಹು ವಿಧವಾಗಿರುತ್ತಾರೆ.

**ಋಷ್ಯಶೃಂಗ.**—ಅವರನ್ನು ವರ್ಣಿಸುವರೆಂದೆಯ ?

**ಚಂಚಲಾ.**—ಹೌದು.

**ಋಷ್ಯಶೃಂಗ.**—ವರ್ಣನೆಯೊಂದನ್ನು ಹೇಳು ಕೇಳೋಣ.

**ಚಂಚಲಾ.**—ತಾಯಿಯ ವರ್ಣನೆಯನ್ನೆ ?

**ಋಷ್ಯಶೃಂಗ.**—ಅಲ್ಲ ಬಾಲಕರು ಅವರನ್ನು ಕುರಿತು ನಾನು ನಿನಗೆ ಹೇಳುವ ಹಾಗೆ ಹೇಳುವರು ಎಂದೆಯಲ್ಲ ಅದನ್ನು ಹೇಳು.

**ಚಂಚಲಾ.**—ವರ್ಣನೆಯನ್ನು ಹೇಳಬೇಕಾದರೆ ಹಾಡಬೇಕಾಗುವುದು. ನನಗೆ ಹಾಡುವುದಕ್ಕೆ ಈಗ ಮನಸ್ಸಿಲ್ಲ.

**ಋಷ್ಯಶೃಂಗ.**—ಇಂಥ ರಾತ್ರಿಯಲ್ಲಿ ಹಾಡುವುದಕ್ಕೆ ಮನಸ್ಸಿಲ್ಲವೆನ್ನುವೆಯಲ್ಲಾ. ನನ್ನ ಮನಸ್ಸು ಉಲ್ಲಾಸದಿಂದ ತುಂಬಿ ಹರಿಯುತ್ತದೆ. ನಿನ್ನ ಹಾಗೆ ಗಾನಮಾಡುವುದಕ್ಕೆ ನನಗೆ ಬಂದಿದ್ದರೆ ನಾನು ಗಾನ ಮಾಡುತ್ತಿದ್ದೆ.

**ಚಂಚಲಾ.**—ಆದಹಾಗೆ ಹಾಡುತ್ತೇನೆ ಕೇಳು. ಇದು ಕೇವಲ ಒಬ್ಬ ಸ್ತ್ರೀಯ ವರ್ಣನ. **(ಹಾಡುವಳು)**

(ರಾಗ: ಜಂಜೂಟಿ)

ನಿನ್ನ ರೂಪ ಪಟದಿ ನೋಡಿ
ಎನ್ನ ಜೀವ ಮಾರುಹೋದುದು
ನಿನ್ನ ಕೋಮಲಾಕೃತಿಯನು
ನೋಡಹೋದ ಎನ್ನ ನೋಟ
ಇನ್ನು ತಾನು ಹಿಂದಿರುಗೆನು
ಎಂದು ಅಲ್ಲೆ ನಿಂದು ಇಹುದು
ತನ್ನ ಜತೆಗೆ ಮನವನೊಯ್ದು
ಅದನು ಅಲ್ಲೆ ನಿಲಿಸಿ ಇಹುದು
ಪ್ರಾಣಕಾಂತೇ—ಪ್ರಾಣಕಾಂತೇ ॥

**ಋಷ್ಯಶೃಂಗ.**—ಇದು ಸ್ತ್ರೀಯ ಪಟವನ್ನು ನೋಡಿ ಹೇಳುವ ಮಾತೋ ?

**ಚಂಚಲಾ.**—ಹೌದು.

**ಋಷ್ಯಶೃಂಗ.**—ಹೇಳುವುದು ಸ್ತ್ರೀಯೊ ಬಾಲಕನೊ?

**ಚಂಚಲಾ.**—ಇಂತಹ ವರ್ಣನೆಯನ್ನು ಪುರುಷರು ಸ್ತ್ರೀಯರ ವಿಷಯದಲ್ಲಿ ಹೇಳುವರು.

**ಋಷ್ಯಶೃಂಗ.**—ಚೆನ್ನಾಗಿದೆ. ಮುಂದಕ್ಕೆ ಹೇಳು.

**ಚಂಚಲಾ.**—(ಹಾಡುವಳು)

ಇನ್ನು ಎರಡುಮೂರು ದಿನಕೆ
ತುಂಬಲಿರುವ ಚಂದ್ರನಂದ
ಕೆನ್ನೆಗಳೊಳು ತೋರುತಿರಲು
ಪೊಸನಾಣಿದು ಮುಗುಳುನಗೆಗೆ
ಹೊನ್ನತೆರದ ಮೆರುಗನಿಡಲು
ಹೊನ್ನಕಾಂತಿ ಮೆಯ್ಯೊಳುಗಲು
ನಿನ್ನ ರೂಪ ಪಟದಿ ನೋಡಿ
ಎನ್ನ ಜೀವ ಮಾರುಹೋದುದು
ಪ್ರಾಣಕಾಂತೇ—ಪ್ರಾಣಕಾಂತೇ ॥

**ಋುಷ್ಯಶೃಂಗ.**—ಆಹಾ! ಈ ವರ್ಣನೆಯು ವಿಚಿತ್ರವಾಗಿದೆ. ಆಮೇಲೆ?

**ಚಂಚಲಾ.**—(ಹಾಡುವಳು)

ಎನ್ನ ಜೀವದಾಸೆಯೆಲ್ಲ
ಎನ್ನ ಕನಸಳೊಮ್ಮೆ ಒಮ್ಮೆ
ಚೆನ್ನೆಯಂತೆ ರೂಪತಳೆದು
ಬಂದು ಆಟಕೆಂದು ಎನ್ನ
ಸನ್ನೆಮಾಡಿ ಕರೆವುದುಂಟು
ಹಿಡಿಯಹೋಗೆ ಸಿಲುಕದಿಹುದು
ಕನ್ನೆಚೆನ್ನೆ ನಿನ್ನ ನೋಡೆ
ಅದುವೆ ನೀನೊ ಎಂಬಂತಿದೆ
ಪ್ರಾಣಕಾಂತೇ—ಪ್ರಾಣಕಾಂತೇ ॥

**ಋುಷ್ಯಶೃಂಗ.**—ಈ ವರ್ಣನೆಯು ವಿಚಿತ್ರವಾಗಿದೆ!

**ಚಂಚಲಾ.**—ವಿಚಿತ್ರ ಹೇಗೆ?

**ಋುಷ್ಯಶೃಂಗ.**—ಈ ಮಾತನ್ನೆಲ್ಲವನ್ನೂ ನಾನು ನಿನ್ನ ವಿಷಯದಲ್ಲಿ ಹೇಳಬಹುದು. ನಿನ್ನನ್ನು ನೋಡಿದರೆ ನನ್ನ ಜೀವದಾಸೆಯೆಲ್ಲ ಎದುರಿಗೆ ಬಂದು ನಿಂತಂತೆ ಕಾಣುತ್ತದೆ.

**ಚಂಚಲಾ.**—ಆದರೆ ಈ ಗೀತೆಯನ್ನು ಬರೆದಿರುವುದು ಒಬ್ಬ ಕನ್ನೆಯ ವಿಷಯವಾಗಿ.

**ಋುಷ್ಯಶೃಂಗ.**—ಅವಳು ನಿನ್ನಷ್ಟು ಚೆನ್ನಾಗಿರುವಳೊ?

**ಚಂಚಲಾ.**—ಸ್ತ್ರೀಯರ ರೂಪು ಪುರುಷರ ರೂಪಿನಿಂದ ಬೇರೆಯಾಗಿರುವುದು.

**ಋುಷ್ಯಶೃಂಗ.**—ಯಾವ ರೀತಿಯಲ್ಲಿ?

**ಚಂಚಲಾ.**—ಅದನ್ನು ವರ್ಣಿಸಿ ಹೇಳುವುದಕ್ಕಾಗುವುದಿಲ್ಲ. ನಮ್ಮೂರಿಗೆ ಬಾ ತಿಳಿಯುವುದು.

**ಋುಷ್ಯಶೃಂಗ.**—ನಮ್ಮ ತಂದೆಯುವರು ಬರುವತನಕ ಈ ಆಶ್ರಮುವನ್ನು ಬಿಡುವುದಕ್ಕೆ ಇಲ್ಲ. ಅವರು ಮಾಡಿದ ಅಪ್ಪಣೆಯನ್ನು ನಡೆಯಿಸ ಬೇಕು.

**ಚಂಚಲಾ.**—ನೀನು ಆಮೇಲೆಯೇ ಬರಬಹುದು. ನಾನು ನಾಳೆ ಹೊರಡ ಬೇಕು.

**ಋುಷ್ಯಶೃಂಗ.**—ನಾನು ಒಬ್ಬನಾಗುತ್ತೇನಲ್ಲಾ. ನನ್ನನ್ನು ಬಿಟ್ಟು ಹೊರಟು ಹೋಗುವೆಯು ಚಂಚಲ ?

(ಕಂದ)

ಉಳಿಯಲ್ ನೀನೆನ್ನಂ ಚಂ
ಚಲ ಎನ್ನಯ ದಿನಗಳೆಂತು ಕಳಿವುವೊ ಕಾಣೆಂ
ಕಳೆಯುಳಿದೀವನಮುಂ ತಾಂ
ಪಳುವಮುದೆಂದೆನಿಕುವೆಂದುಮಿಲ್ಲದ ತೆರದೊಳ್ ॥

**ಚಂಚಲಾ.**—ನಾನೇನು ಮಾಡಲಿ ? ನಾನು ಎರಡು ಮೂರು ದಿನಗಳ ಹಿಂದೆಯೇ ಹೋಗಬೇಕಾಗಿತ್ತು. ನಿನ್ನನ್ನು ಬಿಟ್ಟುಹೋಗು ವುದಕ್ಕೆ ಇಷ್ಟವಿಲ್ಲದೆ ನಿಂತೆನು. ಇನ್ನು ನಿಲ್ಲುವುದು ಸಾಧ್ಯವಲ್ಲ.

**ಋುಷ್ಯಶೃಂಗ.**—ನಿನ್ನನ್ನು ಹೇಗಾದರೂ ಮಾಡಿ ಎಂದೆಂದಿಗೂ ಇಲ್ಲಿ ನಿಲ್ಲಿಸಿ ಕೊಳ್ಳೋಣವೆಂದು ತೋರುವುದು.

**ಚಂಚಲಾ.**—ನೀನು ನಮ್ಮೂರಿಗೆ ಬಂದರೆ ಹೀಗೆನ್ನಲಾರೆ. ನನ್ನನ್ನು ನೋಡಿ ನಾನು ಬಹಳ ಚೆನ್ನಾಗಿದೇನೆ ಎಂದು ನೀನು ಹೇಳುವೆಯಲ್ಲ. ನನ್ನ ತಂಗಿಯೊಬ್ಬಳಿದಾಳೆ. ಅವಳನ್ನು ಕಂಡರೆ ನೀನು ಏನು ಹೇಳು ವೆಯೊ ? ಸ್ತ್ರೀಯರು ಸುಂದರಿಯರೆನ್ನುವರಲ್ಲ. ಅವಳು ಅವರಲ್ಲಿ ಸುಂದರಿಯು. ನೀನು ನಮ್ಮೂರಿಗೆ ಬಂದರೆ ಬೇಕಾದರೆ ನಾನೋ ಅವಳೋ ನಿನ್ನ ಜತೆಗೆ ಇಲ್ಲಿಗೆ ಬಂದು ನಿನ್ನ ಜತೆಗೇ ನಿಲ್ಲುವೆವು.

**ಋುಷ್ಯಶೃಂಗ.**—ನೀನು ಬರುವುದಾದರೆ ಇನ್ನು ಯಾರೂ ಬೇಡ. ಆದರೆ ನಾನು ಬರಲಾರೆ.

**ಚಂಚಲಾ.**—ನಿಮ್ಮ ತಂದೆಯವರು ಹಿಂದಿರುಗುವ ಮುಂದೆಯೇ ಹಿಂದಕ್ಕೆ ಬರಬಹುದು.

**ಋಷ್ಯಶೃಂಗ.**—ಆಗುವುದಿಲ್ಲ. ನಿನ್ನನ್ನು ಬಿಟ್ಟಿರಬೇಕಲ್ಲ ಎಂದು ಬಹು ದುಃಖವಾಗುತ್ತಿದೆ. ಆದರೆ ನಾನು ಅವರ ಮಾತನ್ನು ಮೀರ ಲಾರೆನು. ಏನುಮಾಡಲಿ?

**ಚಂಚಲಾ.**—ಸರಿ ಹಾಗಾದರೆ ನಾನು ಹೋಗಿಬರುವೆನು (ಎಂದು ಹತ್ತಿರ ಬರುವಳು).

**ಋಷ್ಯಶೃಂಗ.**—(ಅವಳ ಕೈಯನ್ನು ಹಿಡಿದು) ಚಂಚಲಕುಮಾರ, ನಿನ್ನ ತಂಗಿ ನಿನಗಿಂತ ಚೆನ್ನಾಗಿರುವಳೆನ್ನುವಿಯಾ?

**ಚಂಚಲಾ.**—ಹೌದು.

**ಋಷ್ಯಶೃಂಗ.**—ಅದು ಸಾಧ್ಯವೆ? ಅವಳು ಹೇಗಿರುವಳು ಹೇಳಬಾರದೆ?

**ಚಂಚಲಾ.**—ನಾನು ಹೇಗೆ ಹೇಳಲಿ? ನನ್ನಂತೆ ತೋರುವಳು. ಆದರೆ ನನಗಿಂತ ಚೆನ್ನಾಗಿರುವಳು.

**ಋಷ್ಯಶೃಂಗ.**—ನಾನು ನಿನ್ನನ್ನು ಮೊದಲು ನೋಡಿದ ದಿನ ನಿನ್ನ ತಂಗಿ ಅಲ್ಲಿ ಇದ್ದಳೋ?

**ಚಂಚಲಾ**—ಇಲ್ಲ, (ಎಂದು ಸ್ವಲ್ಪ ಯೋಚಿಸಿ) ಆದರೆ ಅಂದು ನಾವು ಧರಿ ಸಿದ್ದ ಉಡುಪನ್ನು ಧರಿಸುವಳು.

**ಋಷ್ಯಶೃಂಗ.**—ಅದು ಮಾಧವನ ಪೂಜೆಗೆ ನೀವು ಧರಿಸುವ ಉಡುಪು ಎಂದೆ.

**ಚಂಚಲಾ.**—ಹೌದು; ಸ್ತ್ರೀಯರು ಯಾವಾಗಲೂ ಅದನ್ನೇ ಧರಿಸುವರು.

**ಋಷ್ಯಶೃಂಗ.**—ಹಾಗೆಯೇ? ಹಾಗಾದರೆ ಆ ಉಡುಪನ್ನು ಹಾಕಿಕೊಂಡು ಅವಳು ಹೇಗಿದಾಳೆಂದು ನನಗೆ ತೋರಿಸು.

**ಚಂಚಲಾ.**—ಅವಳು ಹೇಗಿದಾಳೆಂದು ನೋಡಲು ಇಷ್ಟು ಆಸಕ್ತಿ ಏನು?

**ಋಷ್ಯಶೃಂಗ.**—ನೀನೇ ಸೌಂದರ್ಯಕ್ಕೆ ಕಲಶವೆಂದುಕೊಂಡಿದ್ದೆ. ಅದಕ್ಕಿಂತ ಅಂದವಾದುದು ಇದೆ ಎನ್ನುವೆಯಲ್ಲ. ಸಾಧ್ಯವೇ ಎಂದು ನೋಡ ಬೇಕು.

**ಚಂಚಲಾ.**—ನೀನು ಮುಂದಕ್ಕೆ ನಮ್ಮೂರಿಗೆ ಬಂದಾಗ ನೋಡಬಹುದು.

**ಋಷ್ಯಶೃಂಗ.**—ಅಂದು ನೋಡುವುದು ಹಾಗಿರಲಿ. ನೀನೇ ಇದಕ್ಕಿಂತ ಚೆನ್ನಾಗಿರುವುದಾದರೆ ಈಗಲೇ ನೋಡೋಣವೆಂದು ಆಸೆಯಾಗುತ್ತದೆ. ಆ ಉಡುಪನ್ನು ಧರಿಸು.

**ಚಂಚಲಾ.**—ಹಾಗಾದರೆ ಬಂದೆ ಇರು (**ಎಂದು ಮರೆಗೆ ಹೋಗುವಳು**).

**ಋಷ್ಯಶೃಂಗ.**—ಇವನು ಎಂತಹ ಮಿತ್ರನು! ಆದರೆ ತಂದೆಯವರ ಆಜ್ಞೆ. ಅವರಿಗೆ ಇವನು ಬರುವನೆಂದು ತಿಳಿದಿರಲಿಲ್ಲ. (**ಎಂದು ಚಂಚಲೆಯು ಹೋದಕಡೆಯೇ ನೋಡುತ್ತ ನಿಲ್ಲುವನು.**)

**ಚಂಚಲಾ.**—(**ಸ್ವಲ್ಪ ಹೊತ್ತಿನಲ್ಲಿ ಸುಂದರವಾದ ವಸ್ತ್ರಗಳನ್ನು ಧರಿಸಿ ಹತ್ತಿರಕ್ಕೆ ಬಂದು ಕೈಹಿಡಿದು**) ಇಗೋ ನೋಡಿದೆಯಾ?

**ಋಷ್ಯಶೃಂಗ.**—(**ಆಶ್ಚರ್ಯದಿಂದ**) ನೀನು ಚಂಚಲನೆ?

**ಚಂಚಲಾ.**—ಅಲ್ಲವೆ?

**ಋಷ್ಯಶೃಂಗ.**—ಅದೇ ಧ್ವನಿ. ಆದರೆ ಇದೇನು ರೂಪು ಇದು ಚಂಚಲ! (**ಸ್ವಲ್ಪ ದೂರ ಸರಿದು**) ಆಹಾ ಭಗವಂತ ಎಂತಹ ಸುಂದರವಾದ ರೂಪಗಳನ್ನು ನೀನು ಧರಿಸುವೆ!

(**ಸಾಂಗತ್ಯ**)

ಪೂರ್ಣಚಂದ್ರನ ತೆರದೆ
ಪೂರ್ಣವಾಯಿತ್ತು ಸೊಬಗು
ಪೂರ್ಣಸುಂದರನಯ್ಯ
ನೀ ಚಂಚಲ
ಮಂದಾಕಿನೀ ಝರಿಯು
ಸೌಂದರ್ಯದೊಂದು ಸರಿ
ಬಂದಂತೆ ತೋರುತಿದೆ
ಕೇಳ್ಚಂಚಲ

ಸಾನಂದ ಸುಂದರನ
ಆನಂದಲಹರಿಯೋ
ನೀನೆಂದು ತೋರುತಿಹೆ
ಕೇಳ್ಚಂಚಲ

ಆಹಾ ಇದೇನು ರೂಪು! ದೇವದೇವ ನಿನ್ನ ಸೃಷ್ಟಿಯ ಕೌಶಲವೆಂಥದು! (ಎನ್ನುತ್ತಾ ಕಣ್ಣನ್ನು ಮುಚ್ಚಿಕೊಂಡು ಧ್ಯಾನ ಮಾಡುತ್ತಾ ದೇವರಿಗೆ ಕೈಮುಗಿಯುವನು. ಕಣ್ಣು ತೆರೆಯುವುದರೊಳಗೆ ಚಂಚಲೆ ಬಂದು ಅವನ ಕಾಲನ್ನು ಮುಟ್ಟಿ ನಮಸ್ಕರಿಸುವಳು. ಒಂದು ಕಡೆಯಿಂದ ಸುಂದರಿ ಬಂದು ಅವಳನ್ನು ಸೆಳೆಯುವಳು. ಇಬ್ಬರೂ ವೇಗವಾಗಿ ಹೊರಟು ಹೋಗುವರು. ಋಷ್ಯಶೃಂಗನು ಕಣ್ಣನ್ನು ತೆರೆದು) ಚಂಚಲಕುಮಾರ, ಚಂಚಲ, ಎಲ್ಲಿರುವೆ? ನಾನೂ ಬರುವೆನು ಇರು. ಇಗೋ ಬಂದೆ (ಎಂದು ಅವರು ಹೋದಕಡೆ ಹೋಗುವನು).

(ಪರದೆ ಬೀಳುವುದು)

# ನಾಲ್ಕನೆಯ ಸ್ಥಾನ

ಲೋಮಪಾದರಾಯನ ಆಸ್ಥಾನ.

**ಸೇವಕನೊಬ್ಬನೂ ಋಷ್ಯಶೃಂಗನೂ ಬರುವರು.**

**ಋಷ್ಯಶೃಂಗನು ಒಂದು ಪೀಠದಲ್ಲಿ ಕುಳಿತುಕೊಳ್ಳುವನು.**

**ಋಷ್ಯಶೃಂಗ.—(ತಾನೇ)** ಚಂಚಲಕುಮಾರನನ್ನು ಬಿಡಲಾರದೆ ಅವನ ಜತೆಗೆ ಬಂದೆನು. ಮೂರುತಿಂಗಳಿಂದ ಅವನನ್ನು ನೋಡುವುದಕ್ಕೆ ಅವಕಾಶವಿಲ್ಲ. ಅವನೂ ಮುಖ ತೋರಿಸದೆ ಇದಾನೆ. ಸೇವಕರು ಅವನ ಮಾತನ್ನು ಆಡಲೊಲ್ಲರು. ಒಬ್ಬನು ಅವನ ದೇಹಸ್ಥಿತಿ ಸರಿಯಾಗಿಲ್ಲವೆಂದನು. ಇದು ಏನು ರೀತಿಯೋ! ಅಂತೂ ಅವನು ಬೇಡಿಕೊಂಡ ಕೆಲಸವನ್ನು ಮಾಡಿಕೊಟ್ಟದ್ದಾಯಿತು. ಇಂದು ತಪೋವನಕ್ಕೆ ತೆರಳಬೇಕು. ತಂದೆಯವರೂ ಈ ವೇಳೆಗೆ ಹಿಂದಿರುಗಿ ಬಂದಿರಬಹುದು.

**(ರಾಜನು, ಗುರು, ಪ್ರಧಾನಿಗಳು, ಕೆಲಜನರು, ವಂದಿಮಾಗಧರು ಪ್ರವೇಶಿಸುವರು.)**

**ರಾಜ.**—ಮುನಿವರ್ಯರನ್ನು ವಂದಿಸುವೆನು.

**ಋಷ್ಯಶೃಂಗ.**—ರಾಜನಿಗೆ ಮಂಗಳವಾಗಲಿ.

**ರಾಜ.**—ತಮ್ಮ ಕೃಪೆಯಿರುವಂದು ನನಗೆ ಮಂಗಳವು ನಿತ್ಯವು.

(ವೃತ್ತ)

ನೀವೈತಂದು ತಪೋಧನರ್ ಕರುಣೆಯಿಂ ಯಾಗಂಗಳಂ ಸಾರ್ಚಿರಲ್
ದೇವಾಧೀಶ್ವರರೊಲ್ದು ವರ್ಷವಕೊಡಲ್ ಕ್ಷಾಮಾದ್ಯರಿಷ್ಟಂಗಳಾ
ಬಾವಂ ನೀಗುತಲೆನ್ನ ನಾಡಖಿಳಮುಂ ಸೌಭಾಗ್ಯಮಂ ಕಂಡುದೈ
ಏವೇಳ್ವೆಂ ಮುನಿವರ್ಯ ನಾಂ ಋಣಿಯೆ ಎಂದುಂ ನಿಮ್ಮ ಸಾನ್ನಿಧ್ಯದೊಳ್ ॥

**ಋಷ್ಯಶೃಂಗ.**—ರಾಜೇಂದ್ರ ಇದಕ್ಕೆ ಇಷ್ಟು ಉಪಚಾರ ಹೇಳಬೇಕಾದುದಿಲ್ಲ. ನಮ್ಮ ಸಹಾಯದಿಂದ ರಾಜ್ಯದ ಕ್ಷೋಭೆಯು ನೀಗಿದರೆ

ನಮ್ಮ ತಪಸ್ಸು ಸಾರ್ಥಕವಾಯಿತು. ರಾಜ್ಯವು ಕ್ಷೇಮವನ್ನು ಕಂಡುದು ನನಗೆ ಬಹಳ ಸಂತೋಷ.

**ರಾಜ.**—ಈ ರಾಜ್ಯವನ್ನು ತಾವು ರಕ್ಷಿಸಿದಿರಿ. ಇದನ್ನೆಲ್ಲ ನಾನು ತಮ್ಮಲ್ಲಿ ಅರ್ಪಿಸಿ ಇದೇನೆ. ತಾವು ಈ ಸಿಂಹಾಸನವನ್ನೇರಬೇಕು. (**ಎಂದು ಕೈಹಿಡಿದುಕೊಂಡು ಹೋಗಲು ಯತ್ನಮಾಡುವನು. ಪ್ರಧಾನಿಗಳು ಜನರಿಗೆ ಸಂಜ್ಞೆಮಾಡುವರು.**)

**ಜನರು.**—ಋಷ್ಯಶೃಂಗ ಮಹಾರಾಜನಿಗೆ ಜಯವಾಗಲಿ.

ಋಷ್ಯಶೃಂಗ ಮಹಾರಾಜನಿಗೆ ಜಯವಾಗಲಿ.

(**ಹೊರಗಡೆಯೂ ಜನರು ಕೂಗುವರು**)

**ಋಷ್ಯಶೃಂಗ.**—ರಾಜೇಂದ್ರ, ಕಾನನವಾಸಿಯಾದ ತಾಪಸಕುಮಾರನಿಗೆ ರಾಜ್ಯವೇತಕ್ಕೆ? ನನಗೆ ಇದೇನೂ ಬೇಡ.

**ರಾಜ.**—ನಾನು ಇದನ್ನೆಲ್ಲ ತಮ್ಮಲ್ಲಿ ಅರ್ಪಿಸಿದೇನೆ.

**ಋಷ್ಯಶೃಂಗ.**—ಅಯ್ಯಾ ನಾನು ಮತ್ತೆ ಅದನ್ನು ನಿಮಗೆ ಕೊಟ್ಟಿದೇನೆ. ನೀವು ರಾಜ್ಯವನ್ನು ಸುಖದಿಂದ ಆಳಿ ಸುಖದಿಂದ ಬಾಳಿ.

**ರಾಜ.**—ಹಾಗಾದರೆ ನಾನು ನನ್ನ ಕೃತಜ್ಞತೆಯನ್ನು ಹೇಗೆ ತೋರಿಸುವುದು?

**ಋಷ್ಯಶೃಂಗ.**—ಅಯ್ಯಾ ನನಗೆ ಒಂದು ಅಪೇಕ್ಷೆಯು ಉಂಟು.

**ರಾಜ.**—ಅದು ಏನೆಂದು ಅನುಗ್ರಹಿಸಬೇಕು.

**ಋಷ್ಯಶೃಂಗ.**—ನೀವು ನಿಮ್ಮ ಕುಮಾರನನ್ನು ನನ್ನೊಡನೆ ಕಳುಹಿಸುವುದಾದರೆ ನನಗಿನ್ನು ಏನೂ ಬೇಡ.

(ವೃತ್ತ)

ವಿಲಸತ್ಕೋಮಲಕಾಮವಲ್ಲರಿಯೆ ತಾನೈತಂದವೋಲಿರ್ಪನಂ
ಲಲಿತಾಕಾರವತಾಳ್ದು ಮುಂಬರಿದ ನೇಹಂ ತಾನೆನಲ್ ತೋರ್ಪನಂ
ನಲವಂ ನೀಡಲು ಪೂರ್ಣಕೌಮುದಿಯೆ ರೂಪಿಂ ಸಾರ್ದವೋಲಿರ್ಪ ಚಂ
ಚಲನಂ ಮಿತ್ರನನೆನ್ನೊಡಂ ಕಳುಹಿಸಲ್ ನಾಂಕೇಳೆನಿನ್ನೇನುಮಂ ॥

(ರಾಜನು ಪ್ರಧಾನಿಗಳ ಕಡೆ ನೋಡಿ ಸಂಜ್ಞೆಮಾಡುವನು. ವಂದಿಮಾಗಧರು ಮೊದಲಾದವರು ಜಯಘೋಷಮಾಡುವರು.)

**ವಂದಿ.**—ಜಯ ಜಯ ಲೋಮಪಾದರಾಜೇಂದ್ರ.
ಜಯ ಜಯ ರಾಜಾಧಿರಾಜ.

**ಎಲ್ಲರೂ.**—ನಮ್ಮ ಮಹಾರಾಜನಿಗೆ ಜಯವಾಗಲಿ! ಋಷ್ಯಶೃಂಗ ಮಹರ್ಷಿಯ ತಪಸ್ಸು ವೃದ್ಧಿಯಾಗಲಿ! (ಎಂದು ಹೊರಡುವರು. ರಾಜನು, ಗುರು, ಪ್ರಧಾನಿ ಮಾತ್ರ ಋಷಿಯೊಡನೆ ಇರುವರು.)

**ರಾಜ.**—(ಋಷ್ಯಶೃಂಗನಿಗೆ) ತಾಪಸವರ್ಯ, ನನಗೆ ಕುಮಾರರೇ ಇಲ್ಲವಲ್ಲ.

**ಋಷ್ಯಶೃಂಗ.**—(ವಿಸ್ಮಿತನಾಗಿ) ಅದು ಹೇಗೆ? (ಎಂದು ಸ್ವಲ್ಪ ಯೋಚಿಸಿ) ನಿಜ. ಅಂತಹ ಕುಮಾರನನ್ನು ಕಳುಹಿಸಿಬಿಡುವುದಕ್ಕೆ ನಿನಗೆ ಇಷ್ಟವಿರಲಾರದು.

**ರಾಜ.**—ಆದರೆ ನನ್ನ ಕುಮಾರಿಯೊಬ್ಬಳಿದಾಳೆ. ಅವಳನ್ನು ತಮ್ಮ ಜತೆಗೆ ಕಳುಹಿಸುತ್ತೇನೆ. ಕರೆದುಕೊಂಡು ಹೋಗಬಹುದು.

**ಋಷ್ಯಶೃಂಗ.**—ಚಂಚಲನು ತನ್ನ ತಂಗಿಯೊಬ್ಬಳಿದಾಳೆಂದು ಹೇಳಿದ್ದನು. ಆಕೆಯನ್ನೊ?

**ರಾಜ.**—ನನ್ನ ಕುಮಾರಿಯನ್ನು.

**ಋಷ್ಯಶೃಂಗ.**—ಅಯ್ಯೋ ನನಗೆ ಚಂಚಲಕುಮಾರನು ಬೇಕು. ಅವನನ್ನು ಕಳುಹಿಸುವುದಾದರೆ ಸಂತೋಷ. ನನಗೆ ಇನ್ನು ಯಾರೂ ಬೇಡ.

**ಗುರು.**—ಕುಮಾರಿಯನ್ನು ನೋಡಿ ಆಮೇಲೆ ಹೇಳಬಹುದು.

**ಋಷ್ಯಶೃಂಗ.**—ಚಂಚಲನನ್ನು ಒಂದು ಸಲ ನೋಡಿದರೂ ಸಾಕು. ಅವನನ್ನು ಜತೆಗೆ ಕಳುಹಿಸುವುದು ಬೇಡ. ಅವನನ್ನು ನೋಡಲಾದರೂ ಬಹುದೊ?

**ರಾಜ.**—ಆಗಬಹುದು. (ಎಂದು ಒಳಗಡೆ ನೋಡುವನು. ಚಂಚಲಕುಮಾರಿಯು ಪ್ರವೇಶಿಸುವಳು.) ಇಗೋ ನನ್ನ ಕುಮಾರಿ.

(ವೃತ್ತ)

ವಿಲಸತ್ಕೋಮಲಕಾಮವಲ್ಲರಿಯೆ ರೂಪಂ ತಾಳ್ದವೋಲಿರ್ದ ನಿ
ರ್ಮಲಚಾರಿತ್ರೆ ಸುಜಾತೆಯೆನ್ನರಸಿಯಂದೊಲ್ದಿತ್ತ ಸೌರಭ್ಯದೀ
ಮಲರಂ ನಿಮ್ಮ ಪದಂಗಳೊಳ್ ಸಲಿಸುವೆಂ ಸ್ವೀಕಾರದಿಂದೆನ್ನದೀ
ಕುಲಮಂ ಪಾವನಮಾದುದಿಂದೆನಿಪುದೈ ಮೌನೀಂದ್ರ ಕಾರುಣ್ಯದಿಂ॥

ಚಂಚಲಾ ಬಂದು ನಿನ್ನ ಸ್ವಾಮಿಗೆ ನಮಸ್ಕಾರಮಾಡು.

**ಚಂಚಲಾ.**—(ಮುಂದೆ ಬಂದು)

(ವೃತ್ತ)

ಶಿರೀಷಪುಷ್ಪಂ ನವಮಲ್ಲಿಕಾಸುಮಂ
ಸುರೇಂದ್ರನುದ್ಯಾನದ ಪಾರಿಜಾತವುಂ
ವರೇಣ್ಯಮೆಂದೆಂಬರಿವಂ ಸುಮಂಗಳೊಳ್
ವರೇಣ್ಯನಾಂ ನಿಮ್ಮೊಳಿವಂ ಸಮರ್ಪಿಪೆಂ ॥

ಅವುಗಳೊಡನೆ ನನ್ನನ್ನೂ ಸ್ವೀಕರಿಸುವುದು.

**ಋಷ್ಯಶೃಂಗ.**—ನೀನು ಚಂಚಲನೋ ನಿನ್ನ ತಂಗಿಯೋ ?

**ಚಂಚಲಾ.**—ನಾನು ನಿಮ್ಮ ಮಿತ್ರನಾದ ಚಂಚಲ. ನಿಮ್ಮ ಸೇವೆಗೆಂದು ಬಂದಿರುವ ಚಂಚಲೆ. ಇಬ್ಬರೂ ನಾನೇ.

**ಋಷ್ಯಶೃಂಗ.**—ಆಹಾ ನಾನು ಧನ್ಯನು. ನೀನು ತಂದಿರುವ ಈ ಕುಸುಮ ಗಳಿಂದೆಲ್ಲ ನೀನೇ ವರೇಣ್ಯಕುಸುಮವು ಚಂಚಲ.

**ಚಂಚಲಾ.**—ತಾವು ಹಾಗೆನ್ನುವುದು ನನ್ನ ಭಾಗ್ಯ.

(ಸೇವಕನೊಬ್ಬನು ಪ್ರವೇಶಿಸುವನು.)

**ಪ್ರಧಾನಿ.**—ಏನಯ್ಯ, (ಸೇವಕನು ಪ್ರಧಾನಿಗೆ ಏನನ್ನೋ ಮೆಲ್ಲನೆ ಹೇಳುವನು.)

**ಋಷ್ಯಶೃಂಗ.**—(ಚಂಚಲೆಗೆ) ನೀನು ನನ್ನಿಂದ ಯಾವುದೋ ವಿಧದಲ್ಲಿ ಬೇರೆ ಯಾದ ಬಾಲಕನೆಂದು ನನಗೆ ಆಶ್ರಮದಲ್ಲೇ ಒಂದೊಂದು ಸಲ ತೋರಿತು.

**ಚಂಚಲಾ.**—(ನಗುತ್ತಾ) ವಿಷಯವು ತಿಳಿದಮೇಲೆ ಎಲ್ಲರಿಗೂ ಹಾಗೆಯೇ ತೋರುವುದು.

**ಪ್ರಧಾನಿ.**—(**ರಾಜನನ್ನು ಒಂದುಕಡೆಗೆ ಕರೆದುಕೊಂಡು ಹೋಗಿ**) ವಿಭಾಂಡಕ ಮಹಾಮುನಿಗಳು ದಯಮಾಡಿಸುತ್ತಿದ್ದಾರೆಯಂತೆ. ಮೊದಲು ಸ್ವಲ್ಪ ಆಗ್ರಹದಿಂದ ಬರುತ್ತಿರುವಲ್ಲಿ ಪ್ರಜೆಗಳು ನಮ್ರರಾಗಿ ವಿನಯದಿಂದ ನಮಸ್ಕರಿಸಿ ತಮ್ಮನ್ನೆಲ್ಲಾ ಅವರ ಕುಮಾರರು ರಕ್ಷಿಸಿದರೆಂದು ಹೇಳಿದ್ದರಿಂದ ಸ್ವಲ್ಪ ಸಮಾಧಾನವಾಗಿ ಬಿಜಯ ಮಾಡಿಸುತ್ತಿದ್ದಾರೆ ಎಂದು ದೂತನು ಹೇಳಿದನು.

**ರಾಜ.**—ಗುರುಗಳೇ (**ಗುರು ಋಷಿಯನ್ನು ಕರೆತರಲು ಹೋಗುವನು**) ಅವರು ದಯಮಾಡಿಸಿದ್ದು ಒಳ್ಳೆಯದೇ ಆಯಿತು. ಅವರಾದರೂ ರಾಜ್ಯ ವನ್ನು ದಕ್ಷಿಣೆಯಾಗಿ ಸ್ವೀಕರಿಸಿದರೆ ನಾನು ಕೃತಾರ್ಥನು. (**ಗುರು ವಿಭಾಂಡಕನೊಂದಿಗೆ ಪ್ರವೇಶಿಸುವನು. ಗುರು ಅವನಿಗೆ ಸಮಾಧಾನವನ್ನು ಹೇಳುತ್ತಾ ಇರುವನು. ವಿಭಾಂಡಕನು ಇನ್ನೂ ಸ್ವಲ್ಪ ಕೋಪವಾಗಿರುವನು.**) ಮಹರ್ಷಿಗಳಿಗೆ ವಂದಿಸುವೆನು.

**ವಿಭಾಂಡಕ.**—(ಅಸಮಾಧಾನವಾಗಿ) ಒಳ್ಳೆಯದು.

**ಋಷ್ಯಶೃಂಗ.**—ತಂದೆಯೇ, ವಂದಿಸುವೆನು. (**ಸಾಷ್ಟಾಂಗ ಪ್ರಣಾಮ ಮಾಡು ವನು.**)

**ವಿಭಾಂಡಕ.**—ನಿನಗೆ ಮಂಗಳವಾಗಲಿ. ದೀರ್ಘಾಯುಷ್ಮಂತನಾಗಿ ಸುಖ ದಲ್ಲಿ ಬಾಳು.

**ಚಂಚಲಾ.**—(ನಮಸ್ಕರಿಸಿ) ನನಗೆ ಆಶೀರ್ವಾದ ಮಾಡಬೇಕು.

**ವಿಭಾಂಡಕ.**—ನೀನು ಯಾರು?

**ರಾಜ.**—ಇವಳು ನನ್ನ ಕುಮಾರಿ.

**ಋಷ್ಯಶೃಂಗ.**—ಇವನು ನಾನು ಸ್ವೀಕರಿಸಿರುವ ಕನ್ಯೆ.

**ಚಂಚಲಾ.**—ನಾನು ತಮ್ಮ ಕುಮಾರನನ್ನು ಇಲ್ಲಿಗೆ ಕರೆತಂದ ಬಾಲೆ. ಅವರಿಗೆ ಈ ತನುಮನಗಳನ್ನು ಅರ್ಪಿಸಿದೇನೆ.

**ವಿಭಾಂಡಕ.**—(ತಾನೇ) ನನ್ನ ಕೋಪವೇನಾಯಿತು (ಎಂದು ಚಂಚಲೆಗೆ) ಆವನು ಪುಣ್ಯಶಾಲಿಯೋ ಸರಿ. ನಿನಗೆ ಮಂಗಳವಾಗಲಿ.

**ರಾಜ.**—ಇದರಲ್ಲಿ ನನ್ನ ತಪ್ಪನ್ನು ಮನ್ನಿಸಬೇಕು.

**ವಿಭಾಂಡಕ.**—ಮನ್ನಣೆಯನ್ನು ಕೇಳುವ ತಪ್ಪು ನಿನ್ನಲ್ಲಿಲ್ಲ. ನಿನ್ನಿಂದ ನಾನು ಉಪಕೃತನು. ಈ ನಿನ್ನ ಕುಮಾರಿಯ ಹೆಸರೇನು?

**ರಾಜ.**—ಚಂಚಲಾ.

**ವಿಭಾಂಡಕ.**—ರಾಜ್ಯದ ಕ್ಷೋಭೆಗೆ ಶಾನ್ತಿಯನ್ನು ತಂದಂಥವಳೂ ನನ್ನ ಅತೀವವಾದ ಆಗ್ರಹವನ್ನು ಇಷ್ಟು ಸುಲಭವಾಗಿ ಶಮನಗೊಳಿಸಿದ ವಳೂ ಆದ ಇವಳನ್ನು ಇಂದಿನಿಂದ ಶಾನ್ತಾ ಎಂದು ಕರೆಯು ವುದು. ಶಾನ್ತಾ ಇಲ್ಲಿ ಬಾ; ಕುಮಾರ ಇಲ್ಲಿ ಬಾ. ದಾರಿಯಲ್ಲಿ ನಿನ್ನನ್ನು ರಾಜನೆಂದು ಹೇಳಿದರು. ನೀನು ರಾಜ್ಯವನ್ನು ಸ್ವೀಕರಿಸ ಲಿಲ್ಲವಷ್ಟೆ.

**ಋಷ್ಯಶೃಂಗ.**—ಇಲ್ಲ. ಈ ಕನ್ಯೆಯನ್ನು ಮಾತ್ರ ಸ್ವೀಕರಿಸಿದೆ.

**ವಿಭಾಂಡಕ.**—ಬಹಳ ಸಂತೋಷ. ಬನ್ನಿ. (**ಇಬ್ಬರೂ ನಮಸ್ಕರಿಸಿ ನಿಲ್ಲುವರು.**)

(**ಕಂದ**)

ಮಂಗಳಮುಕ್ಕೆಮ ನಿಮಗು
ತ್ತುಂಗ ಸುಖಂ ಶ್ರೀನಿವಾಸನೊಲವಿಂ ಸತತಂ
ಮಂಗಳಮುಂ ಜಗಕೆ ಕೃಪಾ
ಪಾಂಗದ ನೋಟದೊಳು ನೀಡಲನಿಶಂ ಶ್ರೀಶಂ ||

(**ಪರದೆ ಬೀಳುವುದು.**)

**ಸಂಪೂರ್ಣ**

4

1051—2೩. ಬೆಂಗಳೂರು ಪ್ರೆಸ್.